ಪರಮ ದಯಾಮಯ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

'ಆಯತುಲ್ ಕುರ್ಸೀ' ಪವಿತ್ರ ಕುರ್‌ಆನಿನ ಶ್ರೇಷ್ಠ ವಚನವಾಗಿದೆ. ಸಾಮಾನ್ಯವಾಗಿ ಮುಸ್ಲಿಮರು ತಮ್ಮ ಎಲ್ಲ ನಮಾಝ್‌ಗಳಲ್ಲಿ ಇದನ್ನು ಪಠಿಸುತ್ತಾರೆ. ಅದು ಎಲ್ಲರ ಬಾಯಲ್ಲೂ ಸಲೀಸಾಗಿ ಪಠಿಸುವಂತಹ ವಚನವಾಗಿದ್ದು, ಸಂಪ್ರದಾಯದಂತೆ ಅದನ್ನು ಪಠಿಸಲಾಗುತ್ತದೆ. ಅದನ್ನು ಪಠಿಸುವುದರಿಂದ ಪುಣ್ಯವೇನೋ ಸಿಗುತ್ತದೆಯೆಂಬುದರಲ್ಲಿ ಅನುಮಾನವಿಲ್ಲ. ಆದರೆ ಕೇವಲ ಅದರಿಂದೇನೂ ಪ್ರಯೋಜನವಾಗಲಾರದು. ಅರ್ಥವರಿತು ಅದನ್ನು ಪಠಿಸಿದರೆ ಅದರಿಂದ ಮನಸ್ಸಿನ ಮೇಲೆ ಪ್ರಭಾವವುಂಟಾಗಬಹುದು. ಮನುಷ್ಯನಲ್ಲಿ ಚಲನವುಂಟಾಗಬೇಕು. ಇದು ಅಪ್ಪಟ ತೌಹೀದನ್ನು ಪ್ರತಿಪಾದಿಸುವ ವಚನವಾಗಿರುವುದರಿಂದ ಇದರ ಪಠನದಿಂದ 'ತೌಹೀದ್'ನ ಸರಿಯಾದ ಸ್ಫುಟವಾದ ಕಲ್ಪನೆಯು ಮೂಡುವುದು. ಎಲ್ಲ ರೀತಿಯ ವಿಶ್ವಾಸಪರ ಮಾಲಿನ್ಯಗಳು ಮನಸ್ಸಿನಿಂದ ದೂರವಾಗುವುದು. ಆದ್ದರಿಂದ 'ಆಯತುಲ್ ಕುರ್ಸೀ'ಯ ಸುಲಭ ಗ್ರಾಹ್ಯ ಕನ್ನಡ ಭಾಷೆಯಲ್ಲಿ ಅರ್ಥ ಮತ್ತು ವ್ಯಾಖ್ಯಾನವನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ ಈ ಕೃತಿಯನ್ನು ರಚಿಸಲಾಗಿದೆ. ಇಸ್ಲಾಮಿನ ಮೂಲಭೂತವಾದ ತೌಹೀದ್ (ಏಕದೇವತ್ವ) ಹಾಗೂ ಶಫಾಅತ್ ಅಥವಾ ಶಿಫಾರಸಿನ ವಾಸ್ತವಿಕತೆಯನ್ನು ಗ್ರಹಿಸಲು ಈ ಕೃತಿ ಸಹಾಯಕವಾಗಬಹುದೆಂದು ನಿರೀಕ್ಷಿಸುತ್ತೇವೆ.

ಶಾಂತಿ ಪ್ರಕಾಶನ

بِسْمِ اللّٰهِ الرَّحْمٰنِ الرَّحِيْمِ

اَللّٰهُ لَآ اِلٰهَ اِلَّا هُوَ ۚ اَلْحَیُّ الْقَيُّوْمُ ۚ لَا تَاْخُذُهٗ سِنَةٌ وَّلَا نَوْمٌ ؕ لَهٗ مَا فِی السَّمٰوٰتِ وَمَا فِی الْاَرْضِ ؕ مَنْ ذَا الَّذِیْ یَشْفَعُ عِنْدَهٗٓ اِلَّا بِاِذْنِهٖ ؕ یَعْلَمُ مَا بَیْنَ اَیْدِیْهِمْ وَمَا خَلْفَهُمْ ۚ وَلَا یُحِیْطُوْنَ بِشَیْءٍ مِّنْ عِلْمِهٖٓ اِلَّا بِمَا شَآءَ ۚ وَسِعَ كُرْسِیُّهُ السَّمٰوٰتِ وَالْاَرْضَ ۚ وَلَا یَئُوْدُهٗ حِفْظُهُمَا ۚ وَهُوَ الْعَلِیُّ الْعَظِیْمُ ۝

"ಅಲ್ಲಾಹು ಲಾ ಇಲಾಹ ಇಲ್ಲಾಹುವಲ್, ಹಯ್ಯುಲ್ ಕಯ್ಯೂಮ್ ಲಾ ತಅ್‌ಖುದ್‌ಹೂ ಸಿನತುಂವಲಾ ನೌಮುನ್, ಲಹೂ ಮಾಫಿಸ್ಸಮಾವಾತಿ ವಲ್‌ಅರ್ದಿ. ಮನ್‌ದಲ್ಲದೀ ಯಶ್ಫವು ಇಂದಹೂ ಇಲ್ಲಾ ಬಿಇದ್‌ನಿಹೀ, ಯಅ್‌ಲಮು ಮಾ ಬೈನ ಐದೀಹಿಮ್ ವಮಾ ಖಲ್ಫಹುಮ್. ವಲಾ ಯುಹೀತೂನ ಬಿಶೈಇಂಮಿನ್ ಇಲ್ಮಿಹೀ, ಇಲ್ಲಾ ಬಿಮಾಶಾಅ ವಸಿಅ ಕುರ್ಸಿಯ್ಯುಹುಸ್ಸಮಾವಾತಿ ವಲ್ ಅರ್ದ, ವಲಾಯಊದುಹೂ ಹಿಫ್ಲುಹುಮಾ ವಹುವಲ್ ಆಲಿಯ್ಯುಲ್ ಅಝೀಮ್."

ಅಲ್ಲಾಹನು ಚಿರಂತನು, ಸ್ವಯಂಜೀವಂತನು. ಅಖಿಲ ಪ್ರಪಂಚದ ನಿಯಂತ್ರಕನಾದ ಆತನ ಹೊರತು ಆರಾಧ್ಯನಾರೂ ಇಲ್ಲ. ಅವನಿಗೆ ತೂಕಡಿಕೆಯಾಗಲೀ ನಿದ್ರೆಯಾಗಲೀ ಬಾಧಿಸುವುದಿಲ್ಲ. ಆಕಾಶಗಳಲ್ಲಿ ಮತ್ತು ಭೂಮಿಯಲ್ಲಿ ಇರುವುದೆಲ್ಲವೂ ಆತನದೇ. ಆತನ ಸನ್ನಿಧಿಯಲ್ಲಿ ಆತನ ಅಪ್ಪಣೆಯಿಲ್ಲದೆ ಶಿಫಾರಸ್ಸು ಮಾಡ ತಕ್ಕವನಾರಿದ್ದಾನೆ? ದಾಸರ ಮುಂದಿರುವುದನ್ನೂ ಆತನು ಬಲ್ಲನು. ಅವರಿಂದ ಮರೆಯಾಗಿರುವುದನ್ನೂ ಆತನು ಬಲ್ಲನು. ಆತನು ಸ್ವತಃ ತಿಳಿಯಗೊಡಿಸುವ ಹೊರತು ಆತನ ಜ್ಞಾನ ಭಂಡಾರದಿಂದ ಯಾವ ವಿಷಯವನ್ನೂ ಅವರು ತಿಳಿಯಲಾರರು. ಅವನ ಅಧಿಕಾರವು ಆಕಾಶಗಳನ್ನೂ ಭೂಮಿಯನ್ನೂ ವ್ಯಾಪಿಸಿದೆ. ಅವುಗಳ ಸಂರಕ್ಷಣೆಯು ಆತನಿಗೆ ದಣಿಸುವಂತಹ ಕಾರ್ಯವಲ್ಲ. ಅವನು ಏಕೈಕ ಮಹೋನ್ನತನೂ ಸರ್ವ ಶ್ರೇಷ್ಠನೂ ಆಗಿರುತ್ತಾನೆ.

**(ಪವಿತ್ರ ಕುರ್‌ಆನ್, 2:255)**

# ಆಯತುಲ್ ಕುರ್ಸೀ ಒಂದು ಅಧ್ಯಯನ

'ಆಯತುಲ್ ಕುರ್ಸೀ' ಎಂದು ಕರೆಯಲ್ಪಡುವ ಈ ವಚನವು ಪವಿತ್ರ ಕುರ್‌ಆನಿನ ಅತ್ಯಂತ ಶ್ರೇಷ್ಠ ವಚನವೆಂದು ಪ್ರವಾದಿ(ಸ) ಬಣ್ಣಿಸಿದ್ದಾರೆ. ಉಬೈ ಬಿನ್ ಕಅಬ್(ರ) ಎಂಬ ಸಹಾಬಿಯೊಡನೆ ಪ್ರವಾದಿ(ಸ) ಕುರ್‌ಆನಿನ ಅತ್ಯಂತ ಶ್ರೇಷ್ಠ ವಚನ ಯಾವುದೆಂದು ಕೇಳಿದಾಗ, ಅವರು 'ಆಯತುಲ್ ಕುರ್ಸೀ' ಎಂದು ಉತ್ತರಿಸಿದರು. ಅವರು ಇದನ್ನು ಅತ್ಯಂತ ಶ್ರೇಷ್ಠ ವಚನವೆಂದು ಪರಿಗಣಿಸಿದುದಕ್ಕಾಗಿ ಅವರನ್ನು ಪ್ರವಾದಿ(ಸ) ಅಭಿನಂದಿಸುತ್ತಾ, 'ಅಬೂ ಮುಂದಿರ್! ನಿಮಗೆ ನಿಮ್ಮ ಜ್ಞಾನವು ಶುಭವಾಗಲಿ' ಎಂದು ಹಾರೈಸಿದರು.

ಒಮ್ಮೆ ಅಬೂದರ್್(ರ) ಪ್ರವಾದಿಯವರೊಡನೆ, ಕುರ್‌ಆನಿನ ಅತ್ಯಂತ ಶ್ರೇಷ್ಠತಮ ವಚನ ಯಾವುದೆಂದು ಕೇಳಿದಾಗ ಅವರು, ಆಯತುಲ್ ಕುರ್ಸೀ ಎಂದು ಉತ್ತರಿಸಿದರು.

(ಇಬ್ನು ಕಸೀರ್, ಮುಸ್ನದ್ ಅಹ್ಮದ್‌ನಿಂದ)

ಅವರೇ ಹೇಳುತ್ತಾರೆ- ಪ್ರವಾದಿ(ಸ) ಹೇಳಿದರು: "ಕುರ್‌ಆನಿನ ಅಲ್‌ಬಕರಃ ಅಧ್ಯಾಯದಲ್ಲಿ ವಚನಗಳ ಸರದಾರ ಎಂದು ಹೇಳತಕ್ಕಂತಹ ಒಂದು ವಚನವಿದೆ. ಯಾವ ಮನೆಯಲ್ಲಿ ಅದನ್ನು ಪಠಿಸಲಾಗುತ್ತದೋ ಆ ಮನೆಯಿಂದ ಶೈತಾನ್ ಓಡಿ ಹೋಗುತ್ತಾನೆ.

ಒಮ್ಮೆ ಪ್ರವಾದಿ(ಸ) ಹೇಳಿದರು: ಫರ್ಝ್ ನಮಾಝ್‌ಗಳ ಬಳಿಕ ಯಾರು ಆಯತುಲ್ ಕುರ್ಸೀ ಪಠಿಸುತ್ತಾನೋ ಅವನಿಗೆ ಸ್ವರ್ಗಕ್ಕೆ ಹೋಗಲು ಮರಣವಲ್ಲದೆ ಯಾವುದೂ ಅಡ್ಡಿಯಾಗುವುದಿಲ್ಲ. (ನಸಾಈ)

ಈ ವಚನದ ವಿಶೇಷತೆಯೇನೆಂದರೆ ಇದು 'ಅಲ್ಲಾಹ್' ಎಂಬ ಪದದೊಂದಿಗೆ ಆರಂಭಗೊಳ್ಳುತ್ತದೆ. ಪವಿತ್ರ ಕುರ್‌ಆನಿನಲ್ಲಿ 'ಅಲ್ಲಾಹ್' ಎಂಬ ಪದದಿಂದ ಆರಂಭಗೊಳ್ಳುವ ಇನ್ನೂ 27 ವಚನಗಳಿವೆ. ಅಲ್‌ಬಕರಃ 15 ಮತ್ತು 257, ಆಲಿ ಇಮ್ರಾನ್: 2, ಅನ್ನಿಸಾ: 87, ಅರ್ರಅ್‌ದ್: 26, ಇಬ್ರಾಹೀಮ್: 2 ಮತ್ತು 32, ತಾಹಾ: 8, ಅನ್ನೂರ್: 35, ಅನ್ನಮ್ಲ್: 26, ಅಲ್ ಅಂಕಬೂತ್: 62, ಅರ್ರೂಮ್: 11, 40, 48 ಮತ್ತು 54, ಅಸ್ಸಜ್ದ: 4, ಅಝ್ಝುಮರ್: 23, 42 ಮತ್ತು 62, ಅಲ್ ಮೂಮಿನ್: 61,64

ಮತ್ತು 79, ಅಶ್ಶೂರಾ: 17 ಮತ್ತು 19, ಅಲ್ ಜಾಸಿಯ: 12, ಅತ್ತಲಾಕ್: 12, ಅಲ್ ಇಖ್ಲಾಸ್: 2.

ಆಯತುಲ್ ಕುರ್ಸೀಯಲ್ಲಿ ಅಲ್ಲಾಹನ ಏಕತೆ(ತೌಹೀದ್)ಯನ್ನು ಅತ್ಯಂತ ಸ್ಫುಟವಾಗಿ ಮತ್ತು ಸಮಗ್ರವಾಗಿ ಪ್ರತಿಪಾದಿಸಿರುವಷ್ಟು ಬೇರೆ ಯಾವ ವಚನದಲ್ಲೂ ಪ್ರತಿಪಾದಿಸಲಾಗಿಲ್ಲ. ಆದ್ದರಿಂದಲೇ ಪವಿತ್ರ ಕುರ್‌ಆನಿನಲ್ಲಿ ಈ ಒಂದು ವಚನಕ್ಕೆ ಅಷ್ಟೊಂದು ವಿಶೇಷ ಸ್ಥಾನ ಮತ್ತು ಮಹತ್ವ ಕಲ್ಪಿಸಲಾಗಿದೆ. ಇದರಲ್ಲಿ ಪ್ರಪ್ರಥಮವಾಗಿ ಅಲ್ಲಾಹನನ್ನು ಪರಿಚಯಿಸಲಾಗಿದೆ. ಅಂದರೆ ಅವನು ಏಕಮಾತ್ರನು. ಅವನಿಗಾರೂ ಭಾಗೀದಾರರಿಲ್ಲ. ಅವನ ಹೊರತು ಆರಾಧನೆಗಾಗಲಿ, ಅನುಸರಣೆಗಾಗಲಿ ಯಾರೂ ಅರ್ಹರಲ್ಲ. ಇದು 'ಕಲಿಮ ತಯ್ಯಿಬ' (ಪವಿತ್ರ ವಚನ)ದ ಇನ್ನೊಂದು ರೂಪವಾಗಿದೆ. ಪವಿತ್ರ ಕುರ್‌ಆನಿನ ಇನ್ನಿತರ ಕಡೆಗಳಲ್ಲಿ ಅಲ್ಲಾಹನನ್ನು ವಿಸ್ತೃತವಾಗಿ ಪರಿಚಯಿಸಲಾಗಿದೆ. ಉದಾ: (1) "ಹೇಳಿರಿ- ಅವನು ಅಲ್ಲಾಹನು ಏಕೈಕನು. ಅಲ್ಲಾಹನು ಸಕಲರಿಂದಲೂ ನಿರಪೇಕ್ಷನು ಮತ್ತು ಸರ್ವರೂ ಅವನ ಅವಲಂಬಿತರು. ಅವನಿಗೆ ಯಾವುದೇ ಸಂತಾನವಿಲ್ಲ, ಅವನು ಯಾರ ಸಂತಾನವೂ ಅಲ್ಲ ಮತ್ತು ಅವನಿಗೆ ಸರಿಸಮಾನರು ಯಾರೂ ಇಲ್ಲ." (112:1-4)

(2) "ವಿಶ್ವದ ಯಾವ ವಸ್ತುವೂ ಅವನನ್ನು ಹೋಲುವುದಿಲ್ಲ." (42:11)

(3) "ಅವನು ಉಣಿಸುವವನು, ಉಣ್ಣುವವನಲ್ಲ." (6:14)

(4) "ದೃಷ್ಟಿಗಳು ಅವನನ್ನು ಕಾಣಲಾರವು. ಆದರೆ ಅವನು ದೃಷ್ಟಿಗಳನ್ನು ಕಾಣುತ್ತಾನೆ." (6:103)

(5) "ಅವನೇ ಅಲ್ಲಾಹ್ ಅವನ ಹೊರತು ಬೇರಾವ ಆರಾಧ್ಯನೂ ಇಲ್ಲ. ಅಗೋಚರವಾದ ಮತ್ತು ಗೋಚರವಾಗಿರುವ ಎಲ್ಲವನ್ನೂ ಬಲ್ಲವನು. ಅವನೇ ಪರಮ ದಯಾಮಯನೂ ಕರುಣಾನಿಧಿಯೂ ಆಗಿರುತ್ತಾನೆ." (59:22)

(6) ".....ಅವನು ಸಾಮ್ರಾಟನು, ಪರಮ ಪಾವನನು, ಸಾದ್ಯಂತ ಮಂಗಲಮಯನು, ಶಾಂತಿದಾತನು, ಸಂರಕ್ಷಕನು, ಪ್ರಬಲನು, ತನ್ನ ಆಜ್ಞೆಯನ್ನು ಶಕ್ತಿಯಿಂದ ಅನುಷ್ಠಾನಿಸಿ ಬಿಡುವವನು, ಸದಾ ಸರ್ವೋನ್ನತನಾಗಿಯೇ ಇರುವವನು,...." (59:23)

(7) "ಸೃಷ್ಟಿಯ ಯೋಜನೆ ಮಾಡುವವನೂ ಅದನ್ನು ಜಾರಿಗೊಳಿಸುವವನೂ ಅದರಂತೆ ರೂಪಕೊಡುವವನೂ ಅಲ್ಲಾಹನೇ, ಅವನಿಗೆ ಅತ್ಯುತ್ತಮ ನಾಮಗಳಿವೆ...." (59:24)

(8) "ಅವನು ಭೂಮಿ-ಆಕಾಶಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿರುವನು." (64:3)

(9) "ಭೂಮಿ-ಆಕಾಶಗಳಲ್ಲಿರುವ ಪ್ರತಿಯೊಂದು ವಸ್ತುವಿನ ಜ್ಞಾನ ಅವನಿಗಿದೆ. ನೀವು ಅಡಗಿಸಿಡುವುದನ್ನೂ ಪ್ರಕಟಗೊಳಿಸುವುದನ್ನೂ ಅವನು ಬಲ್ಲನು ಮತ್ತು ಅಲ್ಲಾಹನು ಅಂತರಾಳದ ಸ್ಥಿತಿಯನ್ನೂ ಅರಿತಿರುತ್ತಾನೆ." (64:4)

ಆಯತುಲ್ ಕುರ್ಸೀಯಲ್ಲಿ 'ಅಲ್ಲಾಹ್' ಎಂಬುದು ನಾಮಪದವಾಗಿದೆ. ಅದು ಸೃಷ್ಟಿಕರ್ತನ ಹೆಸರು. ಅವನನ್ನು ಅದೇ ಹೆಸರಿನಿಂದ ಕರೆಯತಕ್ಕದ್ದು. ಆ ಪದಕ್ಕೆ

ಪರ್ಯಾಯವಿಲ್ಲ. ಅದಕ್ಕೆ ಬಹುವಚನವಿಲ್ಲ. ಅದು ಒಂಟಿ ಪದವಾಗಿದೆ. ಅಲ್ಲಾಹನಿಗೆ ಇದಲ್ಲದೆ ಇನ್ನೂ ಅನೇಕ ಹೆಸರುಗಳಿವೆ. ಯಾವ ಹೆಸರಿನಿಂದಲೂ ಅವನನ್ನು ಕರೆದು ಪ್ರಾರ್ಥಿಸಬಹುದು. ಪವಿತ್ರ ಕುರ್‌ಆನ್ ಹೇಳುತ್ತದೆ.

**"ಅಲ್ಲಾಹನು ಉತ್ತಮ ನಾಮಗಳಿಗೆ ಅರ್ಹನಾಗಿದ್ದಾನೆ. ಅವನನ್ನು ಉತ್ತಮ ನಾಮಗಳಿಂದಲೇ ಕರೆಯಿರಿ" (7:180)**

**"ಓ ಪೈಗಂಬರರೇ, ಇವರೊಡನೆ ಹೇಳಿರಿ! 'ಅಲ್ಲಾಹ್ ಎಂದು ಕರೆಯಿರಿ ಅಥವಾ ಪರಮ ದಯಾಮಯ ಎಂದು ಕರೆಯಿರಿ' ಯಾವ ಹೆಸರಿಂದ ಕರೆದರೂ ಅವನಿಗೆ ಎಲ್ಲವೂ ಒಳ್ಳೆಯ ನಾಮಗಳೇ ಇವೆ." (17:110)**

**"ಅವನು ಅಲ್ಲಾಹ್. ಅವನ ಹೊರತು ಅನ್ಯ ದೇವನಿಲ್ಲ. ಅವನಿಗೆ ಅತ್ಯುತ್ತಮ ನಾಮಗಳಿವೆ." (20:8)**

ಪ್ರವಾದಿ(ಸ) ಹೇಳಿದರು- ಅಲ್ಲಾಹನಿಗೆ ತೊಂಬತ್ತೊಂಬತ್ತು(99) ನಾಮಗಳಿವೆ- ನೂರಕ್ಕೆ ಒಂದು ಕಡಿಮೆ. ಯಾರು ಅದನ್ನು ಸಂರಕ್ಷಿಸುವನೋ ಅವನು ಸ್ವರ್ಗವನ್ನು ಪ್ರವೇಶಿಸುವನು. **(ಬುಖಾರಿ)**

ಈ 99 ನಾಮಗಳ ಪೈಕಿ ಎರಡು ನಾಮಗಳನ್ನು ಆಯತುಲ್ ಕುರ್ಸೀಯಲ್ಲಿ ತೆಗೆದು ಕೊಳ್ಳಲಾಗಿದೆ. ಅಲ್ ಹಯ್ಯ್(ಚಿರಂತನನು) ಮತ್ತು ಕಯ್ಯೂಮ್(ಅಖಿಲ ಪ್ರಪಂಚದ ನಿಯಂತ್ರಕನು)

"ಅಲ್ಲಾಹನ ಗುಣ ನಾಮಗಳನ್ನು ಮುಂದಿಟ್ಟು ಆತನಲ್ಲಿ ಪ್ರಾರ್ಥಿಸಿದರೆ ಅದು ಸ್ವೀಕರಿಸಲ್ಪಡುತ್ತದೆ. ಏನಾದರೂ ಬೇಡಿದರೆ ಅದು ಈಡೇರಿಸಲ್ಪಡುತ್ತದೆ" ಎಂದು ಪ್ರವಾದಿ(ಸ) ಹೇಳಿದ್ದಾರೆ. **(ಅಬೂದಾವೂದ್, ನಸಾಈ, ಇಬ್ನುಮಾಜ, ತಬ್ರಾನೀ, ಹಾಕಿಮ್, ಅಹ್ಮದ್)**

ಹಯ್ಯುಲ್ ಕಯ್ಯೂಮ್ ಎಂಬುದು ಪರಸ್ಪರ ಪೂರಕವಾದ ಎರಡು ಪದಗಳಾಗಿವೆ. ಅಂದರೆ ಅಲ್ಲಾಹನು ಚಿರಂತನನಾಗಿದ್ದು ಅವನು ಸಕಲ ಪ್ರಪಂಚವನ್ನು ನಿಯಂತ್ರಣ ದಲ್ಲಿರಿಸಿದ್ದಾನೆ. ಅವನ ಹೊರತು ಯಾವ ಆರಾಧ್ಯರೂ ಇಲ್ಲ. ಅಲ್ಲಾಹನು ಚಿರಂತನನೆಂದರೆ ಅವನು ಎಲ್ಲಿಂದಲೋ ಅಸ್ತಿತ್ವಕ್ಕೆ ಬಂದವನಲ್ಲ. ಅವನು ಅನಾದಿ ಕಾಲದಿಂದಲೂ ತನ್ನ ಬಲದಿಂದಲೇ ಇರುವವನು. **"ಸ್ವಯಂ ಜೀವಂತನೂ ಅಮರನೂ ಆಗಿರುವ ದೇವನ ಮೇಲೆ ಭರವಸೆಯಿಡಿರಿ." (25:58)** ಅವನು ಮರಣಕ್ಕೆ ಅತೀತನಾಗಿದ್ದಾನೆ. ಅವನ ಸೃಷ್ಟಿ ಗಳೆಲ್ಲವೂ ಒಂದು ದಿನ ನಾಶವಾಗಿ ನಾಸ್ತಿಯಾಗಲಿವೆ. ಆದರೆ ಅವನು ಮಾತ್ರ ಉಳಿಯುವನು. **"ಈ ಭೂಮಿಯಲ್ಲಿರುವ ಪ್ರತಿಯೊಂದು ವಸ್ತುವೂ ನಾಶವಾಗಲಿದೆ ಮತ್ತು ನಿನ್ನ ಪ್ರಭುವಿನ ತೇಜೋಮಯ ಹಾಗೂ ಔದಾರ್ಯ ಪೂರ್ಣ ಅಸ್ತಿತ್ವ ಮಾತ್ರ ಉಳಿಯಲಿದೆ." (55:26-27)**

ಕಯ್ಯೂಮ್ ಎಂದರೆ ನಿಯಂತ್ರಕನು. ಈ ಪ್ರಪಂಚದಲ್ಲಿ ಸಕಲ ವಸ್ತುಗಳನ್ನು ಸೃಷ್ಟಿಸಿರುವುದು ಮಾತ್ರವಲ್ಲ, ಅವುಗಳನ್ನು ತನ್ನ ಅಂಕಿತದಲ್ಲಿರಿಸಿ ಅದನ್ನು

ನಿಯಂತ್ರಿಸುವವನಾಗಿದ್ದಾನೆ ಅಲ್ಲಾಹ್. ಸ್ವಯಂ ನಿಂತುಕೊಂಡು ಇತರೆಲ್ಲ ವಸ್ತುಗಳನ್ನು ಹಿಡಿದು ನಿಲ್ಲಿಸುವವನು ಎಂಬುದು ಅದರ ಅರ್ಥ.

ಪವಿತ್ರ ಕುರ್‌ಆನಿನ ಇಂಗ್ಲಿಷ್ ವ್ಯಾಖ್ಯಾನಗಾರರಾದ ಮುಹಮ್ಮದ್ ಮರ್ಮಡ್ಯೂಕ್ ಪಿಕ್ಥಾಲ್ ಮತ್ತು ಅಲ್ಲಾಮಾ ಯೂಸುಫ್ ಅಲಿಯವರು ಹಯ್ಯುಲ್ ಕಯ್ಯೂಮ್ ಎಂಬ ಪದಕ್ಕೆ The Alive ಮತ್ತು The Eternal ಎಂದು ಅರ್ಥ ನೀಡಿದ್ದಾರೆ. ಸದಾ ಜೀವಂತ, ಎಂದೆಂದಿಗೂ ಇರುವ ಎಂದು ಇದನ್ನು ಅರ್ಥೈಸಬಹುದು. ತಾನು ಸ್ವತಃ ಜೀವಂತನಾಗಿದ್ದು, ಸ್ವಯಂ ಸ್ಥಿರನಾಗಿದ್ದು ಇತರರನ್ನು ಹಾಗೂ ಇಡೀ ಪ್ರಪಂಚವನ್ನು ಸ್ಥಿರವಾಗಿ ನಿಲ್ಲಿಸಬಲ್ಲವನು ಮಾತ್ರ ದೇವನಾಗಲು ಅರ್ಹತೆ ಹೊಂದಿದ್ದಾನೆ. ತಾನೇ ಜೀವಂತನಿಲ್ಲದಿದ್ದರೆ ಭೂಮಿ-ಆಕಾಶಗಳಿಗೆ ಜೀವ ತುಂಬುವುದು ಹೇಗೆ ಸಾಧ್ಯ? ಅಲ್ಲಾಹನು ಮಾತ್ರ ಈ ಗುಣಗಳನ್ನು ಹೊಂದಿರುವಾಗ ಬೇರೆ ಯಾರನ್ನಾದರೂ ದೇವರೆಂದು ಭಾವಿಸುವುದು ಅಥವಾ ಆತನ ಸಹಭಾಗಿಯೆಂದು ಭಾವಿಸುವುದು ಎಂತಹ ಮೂರ್ಖತನ? ಈ ರೀತಿ ಕುರ್‌ಆನ್ ಜೀವಂತನಲ್ಲದ, ಸ್ವತಃ ಜೀವವಿಲ್ಲದ ಮತ್ತು ಜೀವನದ ಸೂತ್ರವೂ ಅಲ್ಲದ ಹಾಗೂ ಸ್ವಯಂ ನಿಲ್ಲದ ಮತ್ತು ಇತರರನ್ನು ನಿಲ್ಲಿಸಲಾಗದ ಎಲ್ಲ ಅಸ್ತಿತ್ವಗಳನ್ನೂ ನಿರಾಕರಿಸುತ್ತದೆ. ಅವೆಲ್ಲವೂ ತಮ್ಮ ಅಸ್ತಿತ್ವ ಮತ್ತು ಉಳಿವಿಗೆ ಏಕಮಾತ್ರನಾದ ಹಯ್ಯುಲ್ ಕಯ್ಯೂಮ್‌ನನ್ನು ಅವಲಂಬಿಸಿವೆ.

ಆಯತುಲ್ ಕುರ್ಸೀಯಲ್ಲಿ, ಅಲ್ಲಾಹನು ಏಕನು, ಅವನ ಹೊರತು ಯಾವ ಆರಾಧ್ಯರೂ ಇಲ್ಲ ಎಂದು ಅವನನ್ನು ಪರಿಚಯಿಸಿದ ನಂತರ ಅವನು ಯಾರದೇ ಆಶ್ರಯದ ಬಲದಿಂದ ಅಸ್ತಿತ್ವ ಪಡೆದವನಲ್ಲ, ಯಾರಾದರೂ ಹುಟ್ಟಿಸಿ ಹುಟ್ಟಿದವನಲ್ಲ, ಬದಲಾಗಿ ಅವನು ಸ್ವಯಂ ಸದಾ ಅಸ್ತಿತ್ವದಲ್ಲಿರುವನು, ಅವನೇ ಆದಿ, ಅವನಿಗಿಂತ ಮುಂಚೆ ಯಾರೂ ಇರಲಿಲ್ಲ. ಇನ್ನು, ಅವನು ಸೃಷ್ಟಿಸಿದ ಸಕಲ ಪ್ರಪಂಚವೂ ಅಳಿದು ನಾಸ್ತಿಯಾದ ಬಳಿಕವೂ ಅವನು ಇರುವನು. ಸದಾ ಜೀವಂತನು ಎಂದು ಅವನ ಎರಡು ಗುಣನಾಮಗಳನ್ನು ಪರಿಚಯಿಸಲಾಗಿದೆ. ತರುವಾಯ, ಅವನಿಗೆ ತೂಕಡಿಕೆಯಾಗಲಿ, ನಿದ್ರೆಯಾಗಲಿ ಬಾಧಿಸುವುದಿಲ್ಲ ಎನ್ನಲಾಗಿದೆ. ಇದು ಆ ಹಯ್ಯುಲ್ ಕಯ್ಯೂಮ್ ಎಂಬ ಪದಗಳಿಗೆ ಪೂರಕವಾದ ಪದಗಳಾಗಿವೆ.

'ಸಿನತುನ್' ಎಂದರೆ ನಿದ್ರೆಗಿಂತ ಮುಂಚೆ ಮನುಷ್ಯನಿಗೆ ಆವರಿಸುವಂತಹ ಮಂಪರು ಸ್ಥಿತಿಯಾಗಿದೆ. ಜೀವವಿರುವ ಎಲ್ಲ ವಸ್ತುಗಳೂ (ಮನುಷ್ಯ, ಪ್ರಾಣಿ, ಪಕ್ಷಿಗಳು, ಜಲಚರ ವಸ್ತುಗಳು, ಉಭಯ ಜೀವಿಗಳು ಇತ್ಯಾದಿ) ನಿದ್ರಿಸುತ್ತವೆ. ಅವು ತೂಕಡಿಕೆಯನ್ನೂ ಅನುಭವಿಸುತ್ತವೆ. ಅದೇ ರೀತಿ 'ನೌಮ್' ಎಂದರೆ ಸಂಪೂರ್ಣ ನಿದ್ರೆ. ಈ ಸ್ಥಿತಿಯಲ್ಲಿ ಮಾನವ ತನ್ನ ಅಸ್ತಿತ್ವವನ್ನೇ ಮರೆತು ಬಿಡುತ್ತಾನೆ. ತಾನು ಎಷ್ಟು ಹೊತ್ತು ನಿದ್ರಿಸಿದ್ದೇನೆಂದೂ ಅವನಿಗೆ ತಿಳಿದಿರುವುದಿಲ್ಲ. ಕುರ್‌ಆನಿನಲ್ಲಿ ಓರ್ವ ವಯೋವೃದ್ಧನ (ಬಹುಶಃ ಕೆಲವರ ಅಭಿಪ್ರಾಯದಲ್ಲಿ ಉಝೈರ್) ನಿದ್ರೆಯ ಕುರಿತು ಹೀಗೆ ಹೇಳಲಾಗಿದೆ.

"ಆಗ ಅಲ್ಲಾಹನು ಅವನ ಪ್ರಾಣಹರಣಗೈದನು. ಅವನು ನೂರು ವರುಷಗಳ ತನಕ ಶವವಾಗಿ ಬಿದ್ದಿದ್ದನು. ಅನಂತರ ಅಲ್ಲಾಹನು ಅವನನ್ನು ಪುನಃ ಜೀವಂತಗೊಳಿಸಿ, 'ನೀನು ಎಷ್ಟು ಕಾಲ ಬಿದ್ದುಕೊಂಡಿದ್ದೆ?' ಎಂದು ಕೇಳಿದನು. ಅವನು, 'ಒಂದು ದಿನ ಅಥವಾ ಕೆಲವು ತಾಸುಗಳಿದ್ದಿರಬಹುದು' ಎಂದನು." (2:259)

ಇಲ್ಲಿ ಮರಣವೆಂಬುದು ನಿದ್ರೆಯನ್ನು ಸೂಚಿಸುತ್ತದೆ. ಏಕೆಂದರೆ ಕುರ್‌ಆನಿನಲ್ಲಿ ನಿದ್ರೆಯನ್ನೂ ಮರಣವೆಂದು ಹೇಳಲಾಗಿದೆ. "ಮರಣದ ವೇಳೆ ಆತ್ಮಗಳನ್ನು ವಶಪಡಿಸಿಕೊಳ್ಳು ವವನು ಅಲ್ಲಾಹನೇ ಮತ್ತು ಇನ್ನೂ ಸಾಯದಿದ್ದವನ ಆತ್ಮವನ್ನು ನಿದ್ರಾವಸ್ಥೆಯಲ್ಲಿ ವಶಪಡಿಸಿಕೊಳ್ಳುವವನೂ ಅವನೇ." (39:42) ಅರ್ಥಾತ್ ನಿದ್ರಾವಸ್ಥೆಯಲ್ಲಿ ಮನುಷ್ಯನ ಸ್ಮೃತಿ, ಪ್ರಜ್ಞೆ, ಗ್ರಹಣ ಶಕ್ತಿ, ಇಚ್ಛೆ, ದೇಹಬಲ ಎಲ್ಲವನ್ನೂ ಕಿತ್ತುಕೊಳ್ಳಲಾಗುತ್ತದೆ. ಎಷ್ಟೇ ಬಲಶಾಲಿಯಾಗಿದ್ದರೂ ಅವನು ಗಾಢ ನಿದ್ರೆಯಲ್ಲಿರುವಾಗ ಅವನನ್ನು ಏನು ಮಾಡಿದರೂ, ಒಂದೆಡೆಯಿಂದ ಎತ್ತಿ ಇನ್ನೊಂದೆಡೆಗೆ ಸಾಗಿಸಿದರೂ ಅವನಿಗದು ತಿಳಿದಿರು ವುದಿಲ್ಲ. ಅಸ್ಹಾಬುಲ್ ಕಹ್ಫ್(ಗುಹೆಯವರು)ನವರ ಕತೆ ತುಂಬಾ ರೋಚಕವಾಗಿದೆ. ತಮ್ಮ ಈಮಾನನ್ನು ರಕ್ಷಿಸಿಕೊಳ್ಳಲಿಕ್ಕಾಗಿ ಆ ಏಳು ಮಂದಿ ಯುವಕರು ದೂರದ ಗುಹೆಯೊಂದರಲ್ಲಿ ಆಶ್ರಯ ಪಡೆದರು. ದಣಿವಾರಿಸಲು ಅವರು ಮಲಗಿದಾಗ ಅವರಿಗೆ ನಿದ್ದೆ ಹತ್ತಿತು. ಅವರು ಮುನ್ನೂರಕ್ಕಿಂತಲೂ ಅಧಿಕ ವರ್ಷಗಳ ಕಾಲ ಅದೇ ಸ್ಥಿತಿಯಲ್ಲಿ ಗುಹೆಯಲ್ಲಿ ಬಿದ್ದು ಕೊಂಡಿದ್ದರು. ಅವರು ಎಚ್ಚರಗೊಂಡಾಗ ತಾವು ನಿದ್ರಿಸಿದ ಸಮಯದ ಕುರಿತು ಪರಸ್ಪರ ಚರ್ಚಿಸಿದ್ದನ್ನು ಕುರ್‌ಆನ್ ಈ ರೀತಿ ಚಿತ್ರಿಸಿದೆ.

"ಅವರು ಪರಸ್ಪರ ವಿಚಾರಿಸಿಕೊಳ್ಳಲಿಕ್ಕಾಗಿ ಇದೇ ವೈಚಿತ್ರ್ಯದೊಂದಿಗೆ ನಾವು ಅವರನ್ನು ಎಬ್ಬಿಸಿದೆವು. ಅವರಲ್ಲೊಬ್ಬನು- 'ಈ ಸ್ಥಿತಿಯಲ್ಲಿ ನೀವು ಎಷ್ಟು ಕಾಲ ಇದ್ದಿರಿ?' ಎಂದನು. ಆಗ ಉಳಿದವರು, 'ಪ್ರಾಯಶಃ ಒಂದು ದಿನ ಅಥವಾ ಅದಕ್ಕಿಂತ ಸ್ವಲ್ಪ ಕಡಿಮೆ ಇರಬಹುದು' ಎಂದರು. ತರುವಾಯ ಅವರು, ನಮ್ಮ ಎಷ್ಟು ಕಾಲಾವಧಿಯು ಈ ಅವಸ್ಥೆಯಲ್ಲಿ ಕಳೆಯಿ ತೆಂಬುದನ್ನು ಅಲ್ಲಾಹನೇ ಚೆನ್ನಾಗಿ ಬಲ್ಲನು" (18:19) ಎಂದರು.

ಅಲ್ಲಾಹನು ಹೇಳುತ್ತಾನೆ- "ಅವರು ತಮ್ಮ ಗುಹೆಯಲ್ಲಿ ಮುನ್ನೂರು ವರ್ಷಗಳಿದ್ದರು, (ಕೆಲವರ ಕಾಲಗಣನೆಯಲ್ಲಿ) ಇನ್ನೂ 9 ವರ್ಷ ಹೆಚ್ಚಿದೆ." (18:25)

ಪ್ರವಾದಿ ನೂಹ್‌ರಿಗೆ 950 ವರ್ಷಗಳಿಗಿಂತಲೂ ಅಧಿಕ ಆಯಸ್ಸು ನೀಡಿದ ಅಲ್ಲಾಹನಿಗೆ ತನ್ನ ದಾಸರನ್ನು ನೂರು ವರ್ಷ ಅಥವಾ ಮುನ್ನೂರು ವರ್ಷ ನಿದ್ರಾವಸ್ಥೆಯಲ್ಲಿ ಹಾಕುವುದು ದೊಡ್ಡ ಕೆಲಸವೇ? ಇದೇ ನಿದ್ರೆ ಕೆಲವೊಮ್ಮೆ ಮರಣವಾಗಿ ಪರಿಣಮಿಸಲಿಕ್ಕೂ ಸಾಧ್ಯವಿದೆ. ಆದ್ದರಿಂದಲೇ ಪ್ರವಾದಿ(ಸ) ಅವರು, ನೀವು ನಿದ್ರಿಸಲು ಹೋಗುವಾಗ ಈ ರೀತಿ ಪ್ರಾರ್ಥಿಸಿರಿ ಎಂದು ಕಲಿಸಿದ್ದಾರೆ. "ಅಲ್ಲಾಹುಮ್ಮ ಬಿಸ್ಮಿಕ ಅಮೂತು ವ ಅಹ್ಯಾ" ಓ ಅಲ್ಲಾಹ್! ನಾನು ನಿನ್ನ ನಾಮದೊಂದಿಗೆ ಸಾಯುವೆನು ಮತ್ತು ನಿನ್ನ ನಾಮದೊಂದಿಗೇ ಜೀವಂತ ಎದ್ದೇಳುವೆನು (ಬುಖಾರಿ, ಮುಸ್ಲಿಮ್) ಅದೇ ರೀತಿ ನಿದ್ರೆಯಿಂದ ಎಚ್ಚೆತ್ತಾಗ

ಮಾಡುವ ಪ್ರಾರ್ಥನೆಯನ್ನು ಹೀಗೆ ಕಲಿಸಿದ್ದಾರೆ- "ಅಲ್ ಹಮ್ದುಲ್ಲಿಲ್ಲಾಹಿಲ್ಲದೀ ಅಹ್ಯಾನಾ ಬಅ್‌ದ ಮಾ ಅಮಾತನಾ ವ ಇಲೈಹಿನ್ನುಶೂರ್" (ನಮ್ಮನ್ನು ಮರಣದ ಬಳಿಕ ಜೀವಂತ ಎಬ್ಬಿಸಿದ ಅಲ್ಲಾಹನಿಗೆ ಸರ್ವಸ್ತುತಿ. ಅವನೆಡೆಗೇ ನಾವು ಮರಳಬೇಕಾಗಿದೆ.)

**(ಬುಖಾರಿ, ಮುಸ್ಲಿಮ್)**

ಒಟ್ಟಿನಲ್ಲಿ ಅಲ್ಲಾಹನು ಮಾನವನಂತಲ್ಲ. ಮಾನವನು ನಿದ್ರಿಸುತ್ತಾನೆ. ನಿದ್ರಿಸದಿದ್ದರೆ ತೂಕಡಿಕೆಯು ಅವನನ್ನು ಬಾಧಿಸಿ ಅವನನ್ನು ನಿದ್ರೆಗೆ ದೂಡುತ್ತದೆ. ನಿದ್ರೆ ಬಂದು ಬಿಟ್ಟರೆ ಅವನು ತನ್ನನ್ನು ತಾನೇ ಮರೆತು ಬಿಡುತ್ತಾನೆ. ತನ್ನ ಬಗ್ಗೆ, ಪ್ರಪಂಚದ ಬಗ್ಗೆ ಪ್ರಜ್ಞೆಯಿಲ್ಲದವನಾಗಿ ಬಿಡುತ್ತಾನೆ. ಆದರೆ ಅಲ್ಲಾಹನು ನಿದ್ರಿಸುವುದಿಲ್ಲ ಮಾತ್ರವಲ್ಲ ಅವನನ್ನು ತೂಕಡಿಕೆಯೂ ಬಾಧಿಸುವುದಿಲ್ಲ. ಅವನು ಸದಾ ಜಾಗೃತಾವಸ್ಥೆಯಲ್ಲಿರುತ್ತಾನೆ. ಆದ್ದರಿಂದಲೇ ಅವನ ಎಲ್ಲ ಚಟುವಟಿಕೆಗಳೂ ಸುಸೂತ್ರವಾಗಿ ಜರಗುತ್ತವೆ. ಅವನು ಪ್ರತಿಕ್ಷಣವೂ ಜಾಗೃತನಾಗಿದ್ದು ತನ್ನ ಪ್ರಪಂಚ ವ್ಯವಸ್ಥೆಯ ಮೇಲ್ನೋಟವನ್ನು ವಹಿಸಿಕೊಂಡಿರುತ್ತಾನೆ. ಈ ರೀತಿಯ ಗುಣ ವೈಶಿಷ್ಟ್ಯಗಳನ್ನು ಅಲ್ಲಾಹನು ಹೊಂದಿರುವಾಗ ಈ ಪ್ರಪಂಚದ ವ್ಯವಸ್ಥೆಯನ್ನು ನೋಡಿಕೊಳ್ಳಲು ಅವನಿಗೆ ಸಹಾಯಕನ ಅಗತ್ಯವಿದೆಯೇ? ಅದಕ್ಕೆ ಅವನು ಇತರರನ್ನು ಅವಲಂಬಿಸಿರುವನೆಂದು ಊಹಿಸುವುದು ಕೂಡಾ ಮೂರ್ಖತನವಾಗಿದೆ.

ತೂಕಡಿಕೆಯಿರುವ ಮನುಷ್ಯನಲ್ಲಿ ಜಾಗೃತ ಪ್ರಜ್ಞೆಯಿರುವುದಿಲ್ಲ. ಆತ ಅಲಕ್ಷನಾಗಿರುತ್ತಾನೆ. ಅಂತಹವನನ್ನು ಮೋಸಗೊಳಿಸುವುದು ಸುಲಭ. ಅಲಕ್ಷ್ಯತನದ ದುರ್ಲಾಭ ಪಡೆದು ಅವನಿಗೆ ಕೇಡು ಮಾಡಬಹುದು, ಹಾನಿ ತಟ್ಟಿಸಬಹುದು, ಮಾನವ ಅದಕ್ಕೆ ಸುಲಭದಲ್ಲಿ ಬಲಿಯಾಗುತ್ತಾನೆ. ಆದರೆ ಹಾಗೆ ಅಲ್ಲಾಹನನ್ನು ಮೋಸಗೊಳಿಸಲಿಕ್ಕೆ, ಅವನಿಗೆ ಕೇಡು ಅಥವಾ ಹಾನಿ ತಟ್ಟಿಸಲಿಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಅಲ್ಲಾಹನು ಸದಾ ಜಾಗೃತಾವಸ್ಥೆಯಲ್ಲಿರುತ್ತಾನೆ. ತೂಕಡಿಕೆ ಅವನನ್ನು ಬಾಧಿಸುವುದಿಲ್ಲ ವೆಂದಿರುವಾಗ, ಇನ್ನು ಅವನಿಗೆ ನಿದ್ರೆ ಬರುವುದಾದರೂ ಹೇಗೆ? ಉಹುದ್ ಯುದ್ಧದ ಹಿನ್ನೆಲೆಯಲ್ಲಿ ಭಯಾವಸ್ಥೆಯ ನಮಾಝನ್ನು ಕಲಿಸುವಾಗ ಅಲ್ಲಾಹನು ಹೇಳುತ್ತಾನೆ- **"ಇನ್ನೂ ನಮಾಝ್ ಮಾಡಿರದ ಇನ್ನೊಂದು ಗುಂಪು ಬಂದು ನಿಮ್ಮ ಸಂಗಡ ನಮಾಝ್ ಮಾಡಲಿ. ಅವರೂ ಜಾಗರೂಕರಾಗಿಯೂ ಶಸ್ತ್ರಧಾರಿಗಳಾಗಿಯೂ ಇರಲಿ. ಏಕೆಂದರೆ ನೀವು ನಿಮ್ಮ ಆಯುಧಗಳಿಂದಲೂ ಸಾಮಾನು ಸಾಮಗ್ರಿಗಳಿಂದಲೂ ಕಿಂಚಿತ್ತಾದರೂ ಅಜಾಗರೂಕ ರಾದಾಗ ನಿಮ್ಮ ಮೇಲೆ ಹಠಾತ್ತಾಗಿ ಎರಗಿಬಿಡಬೇಕೆಂದು ಸತ್ಯನಿಷೇಧಿಗಳು ಹೊಂಚು ಹಾಕಿಕೊಂಡಿರುತ್ತಾರೆ." (4:102)**

ಅದೇ ರೀತಿ ಉಹುದ್ ಯುದ್ಧದ ವೇಳೆ ಉಂಟಾದ ಸ್ಥಿತಿಯನ್ನು ಪವಿತ್ರ ಕುರ್‌ಆನ್ ಹೀಗೆ ವಿವರಿಸಿದೆ- **"ಈ ದುಃಖದ ಬಳಿಕ ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಅದೆಂತಹ ಮನಶಾಂತಿ ನೀಡಿದನೆಂದರೆ ಅವರು ತೂಕಡಿಸತೊಡಗಿದರು." (3:154)** ಅಬೂ ತಲ್ಹಾ(ರ) ಹೇಳುತ್ತಾರೆ- "ಈ ಸ್ಥಿತಿಯಲ್ಲಿ ನಮಗುಂಟಾದ ತೂಕಡಿಕೆಯ ಪ್ರಭಾವದಿಂದ ನಮ್ಮ

ಕೈಯಲ್ಲಿದ್ದ ಖಡ್ಗಗಳು ಕೆಳಗೆ ಬೀಳುತ್ತಿದ್ದುವು." ಅಂದರೆ ಅಲಕ್ಷ್ಯ ಅಥವಾ ತೂಕಡಿಕೆ ಯಿಂದ ಮನುಷ್ಯ ಮೈಮರೆತಿರುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ ಅಲ್ಲಾಹನಾದರೋ ಸದಾ ಜಾಗೃತನಾಗಿರುತ್ತಾನೆ. ತನ್ನೆಲ್ಲ ಸೃಷ್ಟಿಗಳ ಮೇಲೆ ದೃಷ್ಟಿಯನ್ನಿಟ್ಟಿರುತ್ತಾನೆ. ಯಾರಿಗೂ ಅಲ್ಲಾಹನನ್ನು ಸೋಲಿಸಲು, ಅವನಿಗೆ ತೂಕಡಿಕೆ ಅಥವಾ ನಿದ್ರೆ ಆವರಿಸುತ್ತದೆಂದು ಅವನನ್ನು ಮೋಸಗೊಳಿಸಲು ಸಾಧ್ಯವಿಲ್ಲ. ಒಟ್ಟಿನಲ್ಲಿ ನಿದ್ರೆಯಾಗಲಿ, ತೂಕಡಿಕೆಯಾಗಲಿ ಬಾಧಿಸುವುದಿಲ್ಲವೆಂದರೆ ಅವನು ಸದಾ ಎಚ್ಚರದಿಂದ ತನ್ನ ಪ್ರಪಂಚದ ವ್ಯವಸ್ಥೆಯನ್ನು ತಾನೇ ನೋಡಿಕೊಳ್ಳುತ್ತಿದ್ದಾನೆಂದಾಗಿದೆ.

ಆಯತುಲ್ ಕುರ್ಸೀಯಲ್ಲಿ, 'ಅವನಿಗೆ ತೂಕಡಿಕೆಯಾಗಲಿ, ನಿದ್ರೆಯಾಗಲಿ ಬಾಧಿಸುವುದಿಲ್ಲ' ಎಂದ ಬಳಿಕ 'ಭೂಮಿ-ಆಕಾಶಗಳಲ್ಲಿರುವುದೆಲ್ಲವೂ ಅವನದೇ ಆಗಿವೆ.' ಎಂದು ಹೇಳಿರುವುದರ ಅರ್ಥ ಭೂಮಿ ಮತ್ತು ಆಕಾಶಗಳಲ್ಲಿರುವ ಎಲ್ಲ ವಸ್ತುಗಳ ನೈಜ ಒಡೆಯ ಅವನೇ ಆಗಿದ್ದಾನೆ ಎಂದಾಗಿದೆ. ಎಲ್ಲ ವಸ್ತುಗಳೂ ಅವನ ಅಧೀನದಲ್ಲಿವೆ. ಯಾರೂ ಇಲ್ಲಿ ಯಾವುದೇ ವಸ್ತುವಿನ ಒಡೆಯರಲ್ಲ. ಯಾರ ಬಳಿ ಏನಿದೆಯೋ ಅದನ್ನು ಅವನಿಗೆ ತಾತ್ಕಾಲಿಕ ಉಪಯೋಗಕ್ಕಾಗಿ ನೀಡಲಾಗಿದೆ. ಅವುಗಳನ್ನು ಯಾವ ರೀತಿಯಲ್ಲಿ ಬಳಸಲಾಗುತ್ತದೆ ಎಂಬುದನ್ನು ಪರೀಕ್ಷಿಸಲಾಗುವುದು. ಅದಕ್ಕಾಗಿ ಅಲ್ಲಾಹನು ಜೀವನ-ಮರಣಗಳನ್ನು ಸೃಷ್ಟಿಸಿರುವನು. **"ನಿಮ್ಮ ಪೈಕಿ ಯಾರು ಸತ್ಕರ್ಮವೆಸಗುವವನೆಂದು ನೋಡಲಿಕ್ಕಾಗಿ ಅವನು ಜೀವನವನ್ನೂ ಮರಣವನ್ನೂ ಆವಿಷ್ಕರಿಸಿದನು." (67:2)** ಈ ಲೋಕದಲ್ಲಿ ಎಷ್ಟೇ ಸಂಪತ್ತು ದೊರಕಿದರೂ, ಎಷ್ಟೇ ದೊಡ್ಡ ಕುಬೇರನಾದರೂ ಅದನ್ನು ಮಾನವನು ಇಲ್ಲೇ ಬಿಟ್ಟು ಹೋಗಬೇಕಾಗಿದೆ. ಏಕೆಂದರೆ ಸಂಪತ್ತಿನ ನೈಜ ಒಡೆಯ ಅವನಲ್ಲ, ಅಲ್ಲಾಹನಾಗಿದ್ದಾನೆ. ಆ ಸಂಪತ್ತೆಲ್ಲವೂ ಅವನೆಡೆಗೇ ಮರಳುವುದು. **"ಕಟ್ಟಕಡೆಗೆ ಈ ಭೂಮಿ ಹಾಗೂ ಇದರಲ್ಲಿರುವ ಸಕಲ ವಸ್ತುಗಳ ಉತ್ತರಾಧಿಕಾರಿಗಳು ನಾವೇ ಆಗಿರುವೆವು ಮತ್ತು ಎಲ್ಲರೂ ನಮ್ಮ ಕಡೆಗೇ ಮರಳಿಸಲ್ಪಡುವರು." (19:40)**

ಭೂಮಿ-ಆಕಾಶಗಳಲ್ಲಿರುವ ಸಕಲ ವಸ್ತುಗಳ ಒಡೆಯ ಎಂಬುದು ಯಾರಿಂದಲೂ ನಿರಾಕರಿಸಲಾಗದ ವಾಸ್ತವಿಕತೆಯಾಗಿದೆ. ಮಕ್ಕಾದ ಸತ್ಯನಿಷೇಧಿಗಳು ಪ್ರವಾದಿ(ಸ) ಅವರನ್ನು ನಿರಾಕರಿಸಿದಾಗ ಮತ್ತು ಸುಳ್ಳಾಗಿಸಿದಾಗ ಕುರ್‌ಆನ್ ಅವರ ಮುಂದಿಟ್ಟ ಪ್ರಶ್ನೆ ಇದೇ ಆಗಿತ್ತು. **"ನೀವು ಬಲ್ಲವರಾಗಿದ್ದರೆ ಈ ಭೂಮಿ ಮತ್ತು ಇದರೊಳಗಿರುವುದೆಲ್ಲವೂ ಯಾರದೆಂದು ಹೇಳಿರಿ ಎಂದು ಅವರೊಡನೆ ಕೇಳಿರಿ. ಅವರು ಖಂಡಿತವಾಗಿಯೂ 'ಅಲ್ಲಾಹನದು' ಎನ್ನುವರು." (23:84-85)** ಅದೇ ರೀತಿ, **"ಸಪ್ತಗಗನಗಳ ಮತ್ತು ಮಹಾ ಸಿಂಹಾಸನದ ಒಡೆಯನಾರೆಂದು ಇವರನ್ನು ಕೇಳಿರಿ. ಅವರು ಖಂಡಿತವಾಗಿಯೂ 'ಅಲ್ಲಾಹನೇ' ಎನ್ನುವರು." (23:86-87)** ಭೂಮಿ ಮತ್ತು ಅದರೊಳಗಿನ ವಸ್ತುಗಳು, ಏಳು ಆಕಾಶಗಳು ಮತ್ತು ಅಲ್ಲಾಹನ ಅರ್ಶ್ ಪೀಠ- ಒಟ್ಟಿನಲ್ಲಿ ಎಲ್ಲವೂ ಅಲ್ಲಾಹನ ಒಡೆತನಕ್ಕೆ ಸೇರಿದ್ದೆಂಬುದನ್ನು ಒಪ್ಪಿಕೊಳ್ಳದೆ ಇರಲು ಯಾರಿಂದಲೂ ಸಾಧ್ಯವಿಲ್ಲ.

ಆ ಬಳಿಕ, "ಆತನ ಸನ್ನಿಧಿಯಲ್ಲಿ ಆತನ ಅಪ್ಪಣೆಯಿಲ್ಲದೆ ಶಿಫಾರಸು ಮಾಡತಕ್ಕವರು ಯಾರಿದ್ದಾರೆ" ಎಂದು ಕೇಳಲಾಗುತ್ತದೆ. ಯಾರ ಪರವಾಗಿಯಾದರೂ ಶಿಫಾರಸು ಮಾಡ ಬೇಕಾದರೆ ಶಿಫಾರಸು ಮಾಡುವವನಿಗೆ ಅಲ್ಲಾಹನ ಅನುಮತಿ ಅತ್ಯಗತ್ಯವಾಗಿದೆ. ಅವನ ಅನುಮತಿಯಿಲ್ಲದಿದ್ದರೆ ಶಿಫಾರಸು ಅರಣ್ಯ ರೋದನವಾಗುವುದರಲ್ಲಿ ಸಂದೇಹವಿಲ್ಲ. ಶಿಫಾರಸಿಗೆ ಅರಬಿ ಭಾಷೆಯಲ್ಲಿ 'ಶಫಾಅತ್' ಎಂದು ಹೇಳಲಾಗುತ್ತದೆ. ಒಬ್ಬ ದುರ್ಬಲ ವ್ಯಕ್ತಿಗೆ ಸಹಾಯ ಮಾಡಲಿಕ್ಕಾಗಿ ಯಾರಾದರೊಬ್ಬ ದೊಡ್ಡ ವ್ಯಕ್ತಿಯೊಂದಿಗೆ ಸೇರಿಕೊಳ್ಳುವುದಕ್ಕೆ ಶಫಾಅತ್ ಎನ್ನಲಾಗುತ್ತದೆ. ಶರೀಅತ್‌ನ ಪ್ರಕಾರ ಕಿಯಾಮತ್ ಅಥವಾ ವಿಧಿ ನಿರ್ಣಾಯಕ ದಿನದಂದು ಒಬ್ಬ ಪಾಪಿ ವ್ಯಕ್ತಿಯನ್ನು ಕ್ಷಮಿಸುವಂತೆ ಒಬ್ಬ ದೇವಚರ, ಪ್ರವಾದಿ ಅಥವಾ ವಲೀ(ಅಲ್ಲಾಹನ ಆಪ್ತ) ಅಲ್ಲಾಹನ ಬಳಿ ಶಿಫಾರಸು ಮಾಡುವುದೇ 'ಶಫಾಅತ್' ಆಗಿದೆ. ಅಂದು ಶಫಾಅತ್‌ನ ಆರಂಭವು ಪ್ರವಾದಿ ಮುಹಮ್ಮದ್(ಸ) ಅವರಿಂದಾಗುವುದು. ಅವರ ಈ ಶಫಾಅತನ್ನು 'ಶಫಾಅತುಲ್ ಕುಬ್ರಾ ಅಥವಾ ಶಫಾಅತುಲ್ ಉಝ್ಮಾ' ಎಂದು ಹೇಳಲಾಗುತ್ತದೆ. ಪ್ರವಾದಿ ಮುಹಮ್ಮದ್(ಸ) ಅವರ ಶಫಾಅತ್‌ನ ನಂತರ ಇತರ ಪ್ರವಾದಿ ಗಳು, ಸಜ್ಜನರು ಮತ್ತು ಔಲಿಯಾಗಳು (ವಲೀಯ ಬಹುವಚನ) ಶಿಫಾರಸು ಮಾಡುವರು.

ಆಯತುಲ್ ಕುರ್ಸೀಯ ಮುಖ್ಯ ವಿಷಯವೇ ಶಫಾಅತ್ ಆಗಿದೆ. ಶಫಾಅತ್‌ನ ಕುರಿತು ಸರಿಯಾದ ಕಲ್ಪನೆಯಿಲ್ಲದಿದ್ದರೆ ನಮ್ಮ ಅಕೀದಃ (ಮೂಲಭೂತ ವಿಶ್ವಾಸ)ವೇ ಅಪಾಯಕ್ಕೆ ಸಿಲುಕುವ ಸಾಧ್ಯತೆಯಿದೆ. ಅದರಲ್ಲಿ ಸ್ವಲ್ಪವಾದರೂ ಎಡವಟ್ಟಾದರೆ ಮನುಷ್ಯ ಶಿರ್ಕ್ (ಬಹುದೇವತ್ವ) ಮತ್ತು ಕುಫ್ರ್‌ಗೆ (ಸತ್ಯದ ನಿರಾಕರಣೆ) ಬಲಿ ಬೀಳಬಹುದು. ಸಾಮಾನ್ಯವಾಗಿ ಶಫಾಅತ್‌ನ ಕುರಿತು ಜನರಲ್ಲಿರುವ ಭಾವನೆಯೇನೆಂದರೆ, ಅಲ್ಲಾಹನ ಬಳಿ ಆತನ ಆಪ್ತ ದಾಸರಿಗೆ ಬಹಳ ಪ್ರಭಾವವಿರುತ್ತದೆ. ಅವರ ಎಲ್ಲ ಮಾತುಗಳನ್ನೂ ಬೇಡಿಕೆ ಗಳನ್ನೂ ಅಲ್ಲಾಹನು ಕೇಳುತ್ತಾನೆ. ಆದ್ದರಿಂದ ಅವರನ್ನು ಭದ್ರವಾಗಿ ಹಿಡಿದರೆ ಅಥವಾ ಸಂತೃಪ್ತಗೊಳಿಸಿದರೆ ಅಂತ್ಯದಿನದಲ್ಲಿ ಅವರು ನಮ್ಮ ಪರವಾಗಿ ಶಿಫಾರಸು ಮಾಡಿ ನಮ್ಮನ್ನು ಅಲ್ಲಾಹನು ಕ್ಷಮಿಸುವಂತೆ ಮಾಡಿ ಬಿಡುವರು. ಅದರಿಂದಾಗಿ ನಾವು ಸ್ವರ್ಗಕ್ಕೆ ಅರ್ಹರಾಗುವೆವು. ಅಲ್ಲಾಹನು ನಮ್ಮ ಪಾಪಗಳನ್ನೆಲ್ಲ ಕ್ಷಮಿಸಿ, ನಮ್ಮನ್ನು ಸ್ವರ್ಗಕ್ಕೆ ಕಳಿಸುವನು. ಆದರೆ ಅದು ಅತಿ ಅಸಂಬದ್ಧ, ಮಿಥ್ಯ ಹಾಗೂ ಇಸ್ಲಾಮೇತರ ಕಲ್ಪನೆಯಾಗಿದೆ. ಒಂದು ವೇಳೆ ಹಾಗೆ ನಂಬಿ ಬಿಟ್ಟರೆ ಶಿಫಾರಸಿನ ಅಭ್ಯರ್ಥಿಯು ಅನೇಕ ರೀತಿಯ ಗಂಭೀರ ಪಾಪಗಳಲ್ಲಿ ಸಿಲುಕಿ ಬಿಡುವ ಸಾಧ್ಯತೆ ಇದೆ. ಅವುಗಳನ್ನು ಈ ರೀತಿ ಸಂಕ್ಷೇಪಿಸಬಹುದು.

1) ಅವನು ಅಲ್ಲಾಹನಿಗೆ ಭೌತಿಕ ಉದಾಹರಣೆಗಳನ್ನು ನೀಡತೊಡಗುವನು. ಯಾವ ರೀತಿ ಇಲ್ಲಿನ ಅಧಿಕಾರಿಗಳನ್ನು ಮಧ್ಯವರ್ತಿಗಳ ಸಹಾಯವಿಲ್ಲದೆ ಕಾಣಲು ಸಾಧ್ಯವಿಲ್ಲವೋ ಅದೇ ರೀತಿ ಅಲ್ಲಾಹನ ಬಳಿ ತಲುಪಲು ಮಧ್ಯವರ್ತಿಯ ಅಗತ್ಯವಿದೆಯೆಂದು ಭಾವಿಸುವನು. ಈ ರೀತಿ ಅಲ್ಲಾಹನ ಗುಣ ವಿಶೇಷಗಳು ಮತ್ತು ಸ್ಥಾನಮಾನವನ್ನು ಮಾನವನ ಗುಣ ವಿಶೇಷಗಳು ಮತ್ತು ಸ್ಥಾನಮಾನಕ್ಕೆ ಇಳಿಸಿ ಎರಡನ್ನೂ ಸಮಾನವೆಂದು ಬಗೆಯುವನು.

ಇದರಿಂದ ಅವನಲ್ಲಿ ಉದ್ಧಟತನದ ರೋಗವುಂಟಾಗಿ ಅಲ್ಲಾಹನ ಮುಂದೆಯೇ ಅದನ್ನು ಪ್ರಕಟಪಡಿಸ ತೊಡಗುವನು.

2) ಅವನು, ಇಂತಿಂತಹ ಮಹಾನುಭಾವ ಅಥವಾ ವಲೀ ಶಫಾಅತ್ ನೀಡಬಲ್ಲ ಪದವಿಗೇರಿದ್ದಾರೆಂದು ತಾನೇ ತೀರ್ಮಾನಿಸುವನು. ವಸ್ತುತಃ ಅದರ ಅನುಮತಿ ಯಾರಿಗೆ ನೀಡಬೇಕು, ಯಾರಿಗೆ ನೀಡಬಾರದು ಎಂಬುದರ ಜ್ಞಾನವಿರುವುದು ಅಲ್ಲಾಹನಿಗೆ ಮಾತ್ರ. ಅವನೇ ಅದನ್ನು ತೀರ್ಮಾನಿಸುವನು.

3) ಅವನು, ಅಲ್ಲಾಹನನ್ನು ನಂಬುವ ರೀತಿಯಲ್ಲೇ ತನ್ನ ಸ್ವಯಂಕೃತ ಶಿಫಾರಸುದಾರರ ಮೇಲೂ ಭರವಸೆಯಿರಿಸುವನು. ಆಗ ಅವನು ಅಲ್ಲಾಹನ ಬಗ್ಗೆ ನಿರಪೇಕ್ಷನಾಗಿ ಬಿಡುವನು.

4) ಅವನು, ದೇವ ಭಯದಿಂದ ಸತ್ಕರ್ಮ ಮಾಡಿ ಅಲ್ಲಾಹನನ್ನು ಸಂಪ್ರೀತ ಗೊಳಿಸುವ ಬದಲು, ತಾನೇ ಸೃಷ್ಟಿಸಿದ, ಸ್ವಯಂಕೃತ ಶಿಫಾರಸುದಾರರಿಗೆ ಹರಕೆ, ಕಾಣಿಕೆ ಗಳನ್ನು ಸಲ್ಲಿಸಿ ಅವರನ್ನು ಸಂಪ್ರೀತಗೊಳಿಸಲು ಪ್ರಯತ್ನಿಸುವನು. ಶಿಫಾರಸುದಾರರು ತೀರಿಕೊಂಡಿದ್ದರೆ, ಅವರ ಸಮಾಧಿಗೆ ದೀಪ ಹೊತ್ತಿಸಿ, ಚದ್ದರ ಹೊದಿಸಿ, ಗೋರಿಗೆ ಸ್ನಾನ ಮಾಡಿಸಿ ಅಲ್ಲಿ ಉರೂಸ್-ಉತ್ಸವ ಆಚರಿಸುತ್ತಾ ಅಲ್ಲಿನ ಮುಜಾವರ್ ಆಗಿ ಮೆರೆದು ಅವರನ್ನು ಸಂತೋಷಪಡಿಸಿ ತಾನು ಅವರ ಶಿಫಾರಸಿಗೆ ಅರ್ಹನಾಗುವೆನೆಂದು ಭಾವಿಸುವನು.

5) ಅವನು, ತನ್ನ ಸ್ವಯಂಕೃತ ಶಿಫಾರಸುದಾರನು ತನಗೆ ಪರಲೋಕದಲ್ಲಿ ಸಹಾಯ ಮಾಡುವನೆಂದು ನಂಬಿ ಬಿಟ್ಟಾಗ ಇಹಲೋಕಕ್ಕೆ ಸಂಬಂಧಿಸಿದ ವಿಷಯಗಳಲ್ಲೂ ಅವರನ್ನೇ ನಂಬಿ ಕೂರುವನು. ಅಲ್ಲಾಹನನ್ನು ಸಂಕಟಹರ, ವಿಘ್ನ ನಿವಾರಕ, ಅನ್ನದಾತ ಎಂದು ನಂಬುವ ಹಾಗೆಯೇ ಸಂಕಷ್ಟಗಳು ಮತ್ತು ಆಪತ್ತುಗಳ ವೇಳೆ ಅವರನ್ನೂ ಭಾವಿಸಿ, ಅವರನ್ನು ಪ್ರಾರ್ಥಿಸಲು ಮತ್ತು ಅವರ ಮೊರೆ ಹೋಗಲು ಮುಂದಾಗುವನು. ತನ್ಮೂಲಕ ಸ್ಪಷ್ಟ ಶಿರ್ಕ್‌ನಲ್ಲಿ ಸಿಕ್ಕಿ ಬೀಳುವನು.

6) ಅವನು, ತನ್ನ ಸ್ವಯಂಕೃತ ಶಿಫಾರಸುದಾರರನ್ನು ಈ ಲೋಕದಲ್ಲಿ ಸಂಕಟಹರ, ವಿಘ್ನ ನಿವಾರಕ ಮತ್ತು ಅನ್ನದಾತನೆಂದು ಒಪ್ಪಿಕೊಂಡ ಬಳಿಕ, ಅವರ ಕೋಪತಾಪಗಳಿಗೆ, ಅಲ್ಲಾಹನ ಕೋಪತಾಪಕ್ಕೆ ಹೆದರುವ ರೀತಿಯಲ್ಲೇ ಹೆದರಿ ಅದರಿಂದ ಪಾರಾಗಲು ಪ್ರಯತ್ನಿಸುವನು. ವಸ್ತುತಃ ಪರೋಕ್ಷವಾಗಿ ಯಾರನ್ನಾದರೂ ಭಯಪಡುವುದೂ 'ಇಬಾದತ್' ಎಂದು ಪರಿಗಣಿಸಲ್ಪಡುತ್ತದೆ. ಅದು ಅಲ್ಲಾಹನಿಗೆ ಮಾತ್ರ ಮೀಸಲಾಗಿರುವ ಒಂದು ಹಕ್ಕಾಗಿದೆ.

7) ಅವನು, ಅಲ್ಲಾಹನಿಗೆ ಮಾತ್ರ ಮೀಸಲಾಗಿರುವ ಘನತೆ, ಗಾಂಭೀರ್ಯ, ಪ್ರತಾಪ ಗಳನ್ನು ತನ್ನ ಸ್ವಯಂಕೃತ ಶಿಫಾರಸುದಾರರಿಗೂ ಕಲ್ಪಿಸುವನು.

8) ಅಲ್ಲಾಹನ ಪ್ರೀತಿ ಮತ್ತು ಔದಾರ್ಯವನ್ನು ಮನುಷ್ಯ ಪ್ರತಿಕ್ಷಣವೂ ಬಯಸು ವಂತೆ, ಅವನು ತನ್ನ ಸ್ವಯಂಕೃತ ಶಿಫಾರಸುದಾರರಿಂದಲೂ ಪ್ರೀತಿ ಮತ್ತು ಔದಾರ್ಯವನ್ನು ಬಯಸುವನು.

9) ಅಲ್ಲಾಹನ ಎಲ್ಲ ಗುಣ ವೈಶಿಷ್ಟ್ಯಗಳನ್ನು ತನ್ನ ಸ್ವಯಂಕೃತ ಶಿಫಾರಸುದಾರರಿಗೆ ಕಲ್ಪಿಸಿದ ಬಳಿಕ ತನ್ನೆಲ್ಲ ವ್ಯವಹಾರಗಳ ಅಧಿಕಾರವೂ ಅವರ ಹಸ್ತದಲ್ಲಿರುವುದಾಗಿ ನಂಬಿ ಬಿಡುವನು.

10) ಅವನು, ಅಲ್ಲಾಹನನ್ನು ಅನುಸರಿಸಬೇಕು, ಅವನಿಗೆ ವಿಧೇಯತೆ ತೋರ ಬೇಕೆಂಬ ಗೊಡವೆಗೆ ಹೋಗುವುದಿಲ್ಲ. ಸಕಲ ಪಾಪಗಳನ್ನು ಮಾಡಿದ ಬಳಿಕ ಕನಿಷ್ಠ ವರ್ಷಕ್ಕೊಮ್ಮೆಯಾದರೂ ತನ್ನ ಸ್ವಯಂಕೃತ ಶಿಫಾರಸುದಾರರ ಸನ್ನಿಧಿಗೆ ಭೇಟಿ ಕೊಟ್ಟು ಅಥವಾ ಅವರು ದಿವಂಗತರಾಗಿದ್ದರೆ ಅವರ ಸಮಾಧಿಗೆ ಭೇಟಿ ಕೊಟ್ಟು ಹರಕೆ-ಕಾಣಿಕೆ ಗಳನ್ನು ಸಲ್ಲಿಸುವುದರಿಂದ ತನ್ನ ಪಾಪಗಳೆಲ್ಲವೂ ಕ್ಷಮಿಸಲ್ಪಡುವುದೆಂದು ಭಾವಿಸುವನು.

ಶಫಾಅತ್‌ನ ಈ ಮಿಥ್ಯ ಕಲ್ಪನೆಯು ಮಾನವನನ್ನು ಪ್ರತಿ ಕ್ಷಣವೂ ಶಿರ್ಕ್ ಮತ್ತು ಕುಫ್ರ್‌ನ ಕೂಪಕ್ಕೆ ತಳ್ಳುತ್ತಾ ಸಾಗುತ್ತದೆ. ಮಾನವನು ಯಾವುದೇ ಭಯವಿಲ್ಲದೆ ಪಾಪ ಕಾರ್ಯಗಳನ್ನು ಮಾಡುತ್ತಲೇ ಸಾಗುತ್ತಾನೆ.

ಇಂತಹ ಶಫಾಅತ್ ಪರಲೋಕದಲ್ಲಿ ಏನೇನೂ ಪ್ರಯೋಜನಕ್ಕೆ ಬಾರದು, ಅದು ಎಂದೆಂದಿಗೂ ಸ್ವೀಕೃತವಾಗದು ಎಂದು ಪವಿತ್ರ ಕುರ್‌ಆನ್ ಪದೇ ಪದೇ ನಮ್ಮನ್ನು ಎಚ್ಚರಿಸುತ್ತದೆ. ಉದಾ:

(ಅ) "ಯಾರೂ ಯಾರಿಗೂ ಕಿಂಚಿತ್ತೂ ಉಪಕರಿಸದ, ಯಾರಿಂದಲೂ ಪರಿಹಾರಧನ ಸ್ವೀಕರಿಸಲಾಗದ, ಯಾವ ಶಿಫಾರಸೂ ಫಲಕಾರಿಯಾಗದ ಮತ್ತು ಅಪರಾಧಿಗಳಿಗೆ ಎಲ್ಲಿಂದಲೂ ಯಾವ ಸಹಾಯವೂ ಒದಗದ ಆ ದಿನವನ್ನು ಭಯಪಡಿರಿ." **(2:123)**

(ಆ) "ಸತ್ಯವಿಶ್ವಾಸಿಗಳೇ, ವ್ಯಾಪಾರ ವಿನಿಮಯಗಳು ನಡೆಯದ, ಗೆಳೆತನಗಳೂ ಶಿಫಾರಸುಗಳೂ ಫಲಕಾರಿಯಾಗದ ಆ ದಿನ ಬರುವುದಕ್ಕಿಂತ ಮೊದಲೇ ನಾವು ನಿಮಗೊದಗಿಸಿರುವ ಸೊತ್ತು ವಿತ್ತಗಳಿಂದ ಖರ್ಚು ಮಾಡಿರಿ. ನಿರಾಕರಣೆಯ ನೀತಿಯನ್ನು ಹೊಂದಿದವರೇ ಅಕ್ರಮಿಗಳು." **(2:254)**

(ಇ) "ನಾವು ನಿಮಗೆ ಇಹಲೋಕದಲ್ಲಿ ಕೊಟ್ಟಿದ್ದುದನ್ನೆಲ್ಲ ನೀವು ಬಿಟ್ಟು ಬಂದಿರಿ. ಈಗ ನಿಮ್ಮೊಂದಿಗೆ ನಿಮ್ಮ ಕಾರ್ಯನಿರ್ವಹಣೆಯಲ್ಲಿ ಯಾರ ಪಾಲಿದೆಯೆಂದು ನೀವು ತಿಳಿದು ಕೊಂಡಿದ್ದೀರೋ ಆ ನಿಮ್ಮ ಶಿಫಾರಸುದಾರರನ್ನು ನಾವು ಇಲ್ಲಿ ಕಾಣುತ್ತಿಲ್ಲ. ನಿಮ್ಮ ಪರಸ್ಪರ ಸಂಬಂಧಗಳು ಮುರಿದು ಹೋದವು. ನೀವು ಅಭಿಮಾನವಿರಿಸಿಕೊಂಡಿದ್ದವರೆಲ್ಲರೂ ನಿಮ್ಮಿಂದ ಮಾಯವಾಗಿಬಿಟ್ಟರು." **(6:94)**

(ಈ) "ಇವರು ಆ ಅಲ್ಲಾಹನನ್ನು ಬಿಟ್ಟು ಇತರರನ್ನು ಶಿಫಾರಸುದಾರರಾಗಿ ಮಾಡಿ ಬಿಟ್ಟಿರುವರೇ? ಅವರ ಅಧಿಕಾರದಲ್ಲಿ ಏನೂ ಇಲ್ಲದಿದ್ದರೂ ಅವರು ಅವಿವೇಕಿಗಳಾಗಿದ್ದರೂ ಶಿಫಾರಸು ಮಾಡುವರೇ? ಎಂದು ಕೇಳಿರಿ." **(39:43)**

(ಉ) "ನಾನು ಅವನನ್ನು ಬಿಟ್ಟು ಇತರರನ್ನು ಆರಾಧ್ಯರಾಗಿ ಮಾಡಿಕೊಳ್ಳಬೇಕೇ? ವಸ್ತುತಃ ದಯಾಮಯನಾದ ದೇವನು ನನಗೇನಾದರೂ ಹಾನಿಯನ್ನುಂಟು ಮಾಡಲಿಚ್ಛಿಸಿದರೆ

**ಅವರ ಶಿಫಾರಸು ನನಗೇನೂ ಫಲಕಾರಿಯಾಗದು ಮತ್ತು ಅವರು ನನ್ನನ್ನು ಬಿಡುಗಡೆ ಗೊಳಿಸಲಾರರು."** **(36:23)**

ಒಟ್ಟಿನಲ್ಲಿ, ಶಫಾಅತ್‌ನ ಕುರಿತು ನಮ್ಮಲ್ಲಿ ಸಾಮಾನ್ಯವಾಗಿರುವ ಮಿಥ್ಯ ಕಲ್ಪನೆ ಗಳನ್ನು ಪವಿತ್ರ ಕುರ್‌ಆನ್ ಸಾರಾಸಗಟಾಗಿ ನಿರಾಕರಿಸುತ್ತದೆ ಎಂದು ಮೇಲಿನ ವಚನ ಗಳಿಂದ ಸಾಬೀತಾಗುತ್ತದೆ. ಶಿರ್ಕ್-ಕುಫ್ರ್‌ಗಳಲ್ಲಿ ಮುಳುಗಿರುವ ಜನರನ್ನು ನರಕಾಗ್ನಿಯಿಂದ ಪಾರು ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಅದೇ ರೀತಿ ಮುನಾಫಿಕರಿಗೂ ಯಾವುದೇ ಶಿಫಾರಸು ಫಲಕಾರಿಯಾಗದು. ಅಲ್ಲಾಹನ ಹಿಡಿತದಿಂದ, ಆತನ ಶಿಕ್ಷೆಯಿಂದ ಪಾರುಗೊಳಿಸಲು ತನ್ನಿಂದ ಸಾಧ್ಯವಿಲ್ಲವೆಂದು ಪ್ರವಾದಿ ಮುಹಮ್ಮದ್(ಸ) ಸ್ವತಃ ಸಾರಿರುವಾಗ ಬೇರೆಯವ ರಿಂದ ಪಾರು ಮಾಡಲು ಹೇಗೆ ಸಾಧ್ಯ? ಪ್ರವಾದಿ(ಸ) ಅವರಿಗೆ, **"ನಿಮ್ಮ ಅತ್ಯಂತ ನಿಕಟ ಸಂಬಂಧಿಕರಿಗೆ ಎಚ್ಚರಿಕೆ ನೀಡಿರಿ." (26:214)** ಎಂಬ ವಚನ ಅವತೀರ್ಣಗೊಂಡಾಗ ಅವರು ತಮ್ಮ ಹತ್ತಿರದ ಸಂಬಂಧಿಕರನ್ನು ಹೆಸರೆತ್ತಿ ಕರೆದು ಈ ರೀತಿ ಹೇಳಿದರು- ಓ ಅಬ್ಬಾಸ್! ಓ ಅಲ್ಲಾಹನ ಸಂದೇಶವಾಹಕನ ಅತ್ತೆ ಸಫಿಯ್ಯಾ! ಓ ಮುಹಮ್ಮದ್‌ನ ಮಗಳು ಫಾತಿಮಾ! ನೀವೆಲ್ಲ ನರಕಾಗ್ನಿಯಿಂದ ರಕ್ಷಣೆ ಪಡೆಯುವ ಚಿಂತೆಯನ್ನು ನೀವೇ ಮಾಡಿಕೊಳ್ಳಿರಿ. ನಾನು ಅಲ್ಲಾಹನ ಹಿಡಿತದಿಂದ ನಿಮ್ಮನ್ನು ಪಾರು ಮಾಡಲಾರೆ. ನಿಮಗೆ ಬೇಕಾದರೆ, ನನ್ನ ಸಂಪತ್ತಿನಿಂದ ಎಷ್ಟು ಬೇಕಾದರೂ ಕೇಳಿ ಪಡೆಯಬಹುದು." (ಸೀರತುನ್ನಬೀ)

ಮುನಾಫಿಕರನ್ನು ಕ್ಷಮಿಸುವಂತಾಗಲು ಅವರನ್ನು ಕರೆದಾಗ ಅವರು ಉದ್ಧಟತನ ತೋರಿಸಿದರು. ಆಗ ಅಲ್ಲಾಹನ ವತಿಯಿಂದ ಪ್ರವಾದಿಯವರಿಗೆ(ಸ) ಹೀಗೆ ಹೇಳಲಾಯಿತು- **"ಸಂದೇಶವಾಹಕರೇ, ನೀವು ಅವರಿಗಾಗಿ ಕ್ಷಮಾಯಾಚನೆ ಮಾಡಿದರೂ ಮಾಡದಿದ್ದರೂ ಅವರ ಮಟ್ಟಿಗೆ ಒಂದೇ ಆಗಿದೆ. ಅಲ್ಲಾಹನು ಅವರನ್ನು ಎಂದಿಗೂ ಕ್ಷಮಿಸಲಾರನು."** **(63:6)**

ಅಂದರೆ ಅಲ್ಲಾಹನ ಪ್ರವಾದಿಯವರ(ಸ) ಶಿಫಾರಸು (ಕ್ಷಮೆಗಾಗಿ ಪ್ರಾರ್ಥನೆ) ಕೂಡಾ ಮುನಾಫಿಕರ ಮಟ್ಟಿಗೆ ಫಲಕಾರಿಯಾಗದೆಂದು ಇದರಿಂದ ಸ್ಪಷ್ಟವಾಗುತ್ತದೆ.

ಹಾಗಾದರೆ ಕಿಯಾಮತ್‌ನಂದು ಪ್ರವಾದಿಯವರು(ಸ) ಶಿಫಾರಸು ಮಾಡುವರು. ಶಫಾಅತ್ ಅವರಿಂದಲೇ ಆರಂಭಗೊಳ್ಳುವುದು ಎಂಬ ಮಾತು ಎಷ್ಟು ಸತ್ಯ? ಅದೂ ಮಿಥ್ಯ ನಂಬಿಕೆಯೇ ಎಂಬ ಪ್ರಶ್ನೆ ಪ್ರಸ್ತುತವಾಗಿದೆ. ಅದನ್ನು ಕುರ್‌ಆನ್ ಮತ್ತು ಹದೀಸ್‌ಗಳ ಮೂಲಕ ಅರಿಯಲು ಪ್ರಯತ್ನಿಸೋಣ. ಆದರೆ ಅದಕ್ಕಿಂತ ಮುಂಚೆ ಕೆಲವು ವಿಷಯಗಳನ್ನು ಗ್ರಹಿಸುವುದು ಅಗತ್ಯ.

1. ಅಲ್ಲಾಹನು ಸರ್ವಾಧಿಕಾರಿಯಾಗಿದ್ದಾನೆ. ಅವನು ಪ್ರಪಂಚ ಮತ್ತದರೊಳಗಿನ ಸಕಲ ವಸ್ತುಗಳ ಒಡೆಯನಾಗಿದ್ದಾನೆ. ದೇವಚರರು, ಪ್ರವಾದಿಗಳು, ಔಲಿಯಾಗಳು ಹಾಗೂ ಸಜ್ಜನರ ಸಹಿತ ಎಲ್ಲರೂ ಅವನ ಅವಲಂಬಿತರು. ಅವನು ಯಾರನ್ನೂ ಅವಲಂಬಿಸಿಲ್ಲ. ಅವನು ಸಕಲರ ಅಗತ್ಯಗಳನ್ನು ಪೂರೈಸುವವನಾಗಿದ್ದಾನೆ. ಎಲ್ಲರ ಸಾಮ್ರಾಟನಾಗಿದ್ದಾನೆ.

ಎಲ್ಲರೂ ಅವನ ಪ್ರಜೆಗಳು. ಅಲ್ಲಾಹನೆದುರು ಎಲ್ಲರೂ ಅಸಹಾಯಕರೂ ವಿವಶರೂ ಆಗಿದ್ದಾರೆ. ಅವನು ಯಾರನ್ನೂ ಆಶ್ರಯಿಸಿಲ್ಲ. ಅವನು ಅಸಹಾಯಕನೂ ವಿವಶನೂ ಅಲ್ಲ. ಅವನು ಯಾರನ್ನೂ ಭಯಪಡಬೇಕಾಗಿಲ್ಲ. ಎಲ್ಲರೂ ಅವನನ್ನು ಭಯಪಡುವವರಾಗಿದ್ದಾರೆ. ಅವನು ಸರ್ವಶಕ್ತನು, ಸರ್ವಸಮರ್ಥನು. ಅವನ ಅಧಿಕಾರದಲ್ಲಿ ಯಾರೂ ಭಾಗಿಗಳಿಲ್ಲ. ಅವನಿಗೆ ಸಮಾನರೂ ಯಾರೂ ಇಲ್ಲ. ಕಿಯಾಮತ್‌ನ ದಿವಸ ಶಫಾಅತ್‌ನ ಅಧಿಕಾರ ಸರ್ವ ಸಂಪೂರ್ಣವಾಗಿ ಅವನಿಗೇ ಇರುವುದು. **"ಶಿಫಾರಸು ಸಂಪೂರ್ಣವಾಗಿ ಅಲ್ಲಾಹನ ಅಧಿಕಾರದಲ್ಲಿದೆ. ಭೂಮಿ-ಆಕಾಶಗಳ ಪ್ರಭುತ್ವಕ್ಕೆ ಅವನೇ ಒಡೆಯನಾಗಿರುತ್ತಾನೆ. ಅನಂತರ ನೀವು ಅವನ ಕಡೆಗೇ ಮರಳಿಸಲ್ಪಡಲಿರುವಿರಿ ಎಂದು ಹೇಳಿರಿ." (39:44)** ಸ್ವಯಂ ಶಿಫಾರಸು ಮಾಡುವ ಅಧಿಕಾರವನ್ನು ಯಾರೂ ಹೊಂದಿಲ್ಲ. ಯಾರಾದರೂ ಯಾರ ಪರವಾಗಿಯಾದರೂ ಶಿಫಾರಸು ಮಾಡಿದರೆ ಅದನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಕೂಡಾ ಅಲ್ಲಾಹನಿಗೆ ಮಾತ್ರವಿರುವುದು. ಬಲವಂತವಾಗಿ ಯಾರೂ ಅವನ ಮುಂದೆ ಯಾರಿಂದಲೂ ಶಿಫಾರಸು ಮಾಡಿಸುವಂತಿಲ್ಲ.

2. ಕಿಯಾಮತ್‌ನ ದಿವಸ ಶಫಾಅತ್‌ನ ಅನುಮತಿ ಯಾರಿಗೆ ಸಿಗುವುದೆಂಬ ಪ್ರಶ್ನೆ ಬಹಳ ಪ್ರಾಮುಖ್ಯವಾಗಿದೆ. ಈ ಲೋಕದಲ್ಲಿ ಅನೇಕ ಮಂದಿ ತಾವೇ ಕಲ್ಪಿಸಿಕೊಂಡಿರುವ ಇಂತಿಂತಹ ಔಲಿಯಾಗಳು, ಸಜ್ಜನರು ಅಥವಾ ಮಹಾನುಭಾವರು ನಮ್ಮ ಪರವಾಗಿ ಶಿಫಾರಸು ಮಾಡುವರು, ನಮ್ಮ ಪಾಪಗಳನ್ನು ಕ್ಷಮಿಸುವಂತೆ ಮಾಡುವರು ಎಂದು ನಂಬಿ ಕೊಂಡಿದ್ದಾರೆ. ಆದರೆ ಶಿಫಾರಸು ಮಾಡುವ ಅನುಮತಿ ಯಾರಿಗೆ ಇದೆಯೆಂಬುದು ಅಲ್ಲಾಹನಿಗೆ ಮಾತ್ರ ಗೊತ್ತು. ಪ್ರವಾದಿಯವರ(ಸ) ಹೇಳಿಕೆಯಂತೆ, ಪ್ರವಾದಿಗಳು, ಮಲಕ್‌ಗಳು (ದೇವಚರರು) ಮತ್ತು ಸಜ್ಜನರು ಪಾಪಿಗಳ ಪರವಾಗಿ ಶಿಫಾರಸು ಮಾಡುವರು (ಮುಸ್ಲಿಮ್). ಪ್ರವಾದಿಗಳ ಕುರಿತು ಹೇಳುವುದಾದರೆ, ಎಲ್ಲ ಪ್ರವಾದಿಗಳು ತಂತಮ್ಮ ಸಮುದಾಯದ ಪಾಪಿಗಳಿಗಾಗಿ ಶಿಫಾರಸು ಮಾಡುವರು ಎಂಬುದು ನಿರ್ವಿವಾದ. ಏಕೆಂದರೆ ಅವರೆಲ್ಲರೂ ಅಲ್ಲಾಹನಿಂದ ನೇರವಾಗಿ ನೇಮಿಸಲ್ಪಟ್ಟವರು. ಅವರ ಜನತೆಗೂ ಅವರು ಪ್ರವಾದಿಗಳೆಂದು ತಿಳಿದಿರುತ್ತದೆ. ಪ್ರವಾದಿಗಳು ನಿಷ್ಪಾಪಿಗಳೆಂದೂ ಅವರ ಶಿಫಾರಸಿಗೆ ಅಲ್ಲಾಹನ ಬಳಿ ಮನ್ನಣೆಯಿದೆ ಎಂದೂ ಎಲ್ಲರೂ ಬಲ್ಲರು.

ಆದರೆ ಔಲಿಯಾಗಳು, ಸಜ್ಜನರು ಮತ್ತು ಹುತಾತ್ಮರುಗಳ ಪೈಕಿ ಯಾರಿಗೆ ಶಫಾಅತ್‌ನ ಅನುಮತಿ ದೊರೆಯುವುದು, ಯಾರಿಗೆ ದೊರೆಯಲಾರದು ಎಂಬುದು ಅಲ್ಲಾಹನ ದೃಷ್ಟಿಯಲ್ಲಿ ಯಾರು ಔಲಿಯಾಗಳು, ಯಾರು ಸಜ್ಜನರು ಮತ್ತು ಯಾರು ಹುತಾತ್ಮರು ಎಂಬುದನ್ನು ಅವಲಂಬಿಸಿದೆ. ಏಕೆಂದರೆ ಈ ಲೋಕದಲ್ಲಿ ಕೆಲವರು ಔಲಿಯಾಗಳು, ಸಜ್ಜನರು ಮತ್ತು ವಿದ್ವಾಂಸರಾಗಿ ಮೆರೆದಿರುವರು. ಜನರು ಅವರನ್ನು ಹಾಗೆಯೇ ಭಾವಿಸಿ ಅವರಿಗೆ ಭಕ್ತಿ ಭಾವಗಳನ್ನು ಪ್ರಕಟಿಸಿರಬಹುದು. ಆದರೆ ಹದೀಸ್‌ಗಳ ಪ್ರಕಾರ, ಅಂತಹವರನ್ನು ಮೂತಿ ಹಿಡಿದು ನರಕಕ್ಕೆ ಎಸೆಯಲಾಗುವುದು. ಪ್ರವಾದಿ(ಸ)

ಹೇಳಿರುವಂತೆ, "ಕಿಯಾಮತ್‌ನಂದು ಮೊತ್ತ ಮೊದಲು ಓರ್ವ ಹುತಾತ್ಮನನ್ನು ವಿಚಾರಣೆಗಾಗಿ ಅಲ್ಲಾಹನ ಮುಂದೆ ತರಲಾಗುವುದು. ಅಲ್ಲಾಹನು ಅವನಿಗೆ ತಾನು ಮಾಡಿದ ಉಪಕಾರ ಗಳನ್ನೂ ಕೊಡುಗೆಗಳನ್ನೂ ನೆನಪಿಸುವನು. ಅವನು ಅದನ್ನೆಲ್ಲ ಒಪ್ಪಿಕೊಳ್ಳುವನು. ಅಲ್ಲಾಹನು ಅವನೊಂದಿಗೆ, ನೀನು ಆ ಕೊಡುಗೆಗಳನ್ನು ಯಾವ ರೀತಿಯಲ್ಲಿ ಉಪಯೋಗಿಸಿದೆ ಎಂದು ಕೇಳುವನು. ಅವನು ಹೇಳುವನು. ನಾನು ನಿನ್ನ ಮಾರ್ಗದಲ್ಲಿ ಹೋರಾಟ ನಡೆಸಿ ಕೊನೆಗೆ ಹುತಾತ್ಮನಾದೆ. ಆಗ ಅಲ್ಲಾಹನು, ನೀನು ಸುಳ್ಳಾಡುತ್ತಿ. ಜನರು ನಿನ್ನನ್ನು ದೊಡ್ಡ ಪರಾಕ್ರಮಿ, ವೀರಾಧಿವೀರನೆಂದು ಕರೆಯಲಿ ಎಂದು ನೀನು ಹೋರಾಡಿ ಹುತಾತ್ಮನಾದೆ. ನಿನ್ನನ್ನು ಲೋಕದಲ್ಲಿ ಹಾಗೆಯೇ ಕರೆಯಲಾಯಿತು ಎಂದು ಹೇಳುವನು. ತರುವಾಯ ಅವನನ್ನು ಮೂತಿ ಹಿಡಿದು ನರಕಕ್ಕೆಸೆಯುವಂತೆ ದೇವಚರರಿಗೆ ಆಜ್ಞಾಪಿಸುವನು. "ಇದೇ ರೀತಿಯ ಪ್ರಶ್ನೆಗಳನ್ನು ವಿದ್ವಾಂಸ ಮತ್ತು ದಾನಿಯೊಂದಿಗೂ ಕೇಳಲಾಗುವುದು. ಅವರೂ ತಾವು ಅಲ್ಲಾಹನ ಸಂಪ್ರೀತಿಗಾಗಿ ಕೆಲಸ ಮಾಡಿದೆವೆಂದು ಹೇಳಿದಾಗ, ಅಲ್ಲಾಹನು ಅದನ್ನು ಅಲ್ಲಗಳೆದು ನೀವು ಜನರಿಂದ ಹೊಗಳಿಸಿಕೊಳ್ಳಲಿಕ್ಕಾಗಿ ಹಾಗೆ ಮಾಡಿದಿರೆಂದು ಹೇಳಿ ಅವರನ್ನೂ ಮೂತಿ ಹಿಡಿದು ನರಕಕ್ಕೆಸೆಯುವಂತೆ ಆಜ್ಞಾಪಿಸುವನು. (ಮುಸ್ಲಿಮ್) ಇಂತಹ ಹುತಾತ್ಮರು, ವಿದ್ವಾಂಸರು ಮತ್ತು ದಾನಿಗಳಿಗೆ ಶಿಫಾರಸಿನ ಅನುಮತಿ ಸಿಕ್ಕೀತೆ? ಆದ್ದರಿಂದ ಇಂತಿಂತಹ ಮಹಾತ್ಮರಿಂದ ನಮಗೆ ಶಿಫಾರಸು ಸಿಕ್ಕೀತು, ನಾವು ಅಲ್ಲಾಹನ ಹಿಡಿತದಿಂದ ಪಾರಾಗಬಲ್ಲೆವು ಎಂದು ನಾವೇ ಸ್ವಯಂ ನಿರ್ಧರಿಸಿಕೊಳ್ಳುವುದು ಹೇಗೆ? ಅದೊಂದು ವ್ಯರ್ಥ ಕೆಲಸವಾಗಿದ್ದು ಮೋಕ್ಷದ ದೃಷ್ಟಿಯಿಂದ ಅಪಾಯಕಾರಿಯೂ ಆಗಿದೆ. ಒಬ್ಬ ವ್ಯಕ್ತಿಯ ವಿಚಾರಣೆ ನಡೆಯುತ್ತಿರುವಾಗ, ಆತ ಅಪರಾಧಿಯಾಗಿದ್ದರೂ ಅಲ್ಲದಿದ್ದರೂ, ನ್ಯಾಯಾಲಯದ ತೀರ್ಪು ಬರುವುದಕ್ಕೆ ಮುಂಚೆ ಯಾರಾದರೂ ಆತನ ಪರವಾಗಿ ಶಿಫಾರಸು ಮಾಡಲು ಮುಂದಾದರೆ ಅವನನ್ನು ಏನೆನ್ನಬೇಕು? ಅದೇ ರೀತಿಯಲ್ಲಿ ಎಲ್ಲರೂ ವಿಚಾರಣೆಯನ್ನೆದುರಿಸಲು ಪರಲೋಕದಲ್ಲಿ ಸಾಲುಗಟ್ಟಿ ನಿಂತಿರುವಾಗ ಒಬ್ಬನು ಇನ್ನೊಬ್ಬನ ಪರವಾಗಿ ಶಿಫಾರಸು ಮಾಡುವುದು ಹೇಗೆ? ಇದೊಂದು ಅಸಂಬದ್ಧ ವಿಚಾರವಾಗಿದೆ.

3. ಶಫಾಅತ್ ಎನ್ನುವುದು ವಾಸ್ತವದಲ್ಲಿ ಜಗದೊಡೆಯನಾದ ಅಲ್ಲಾಹನ ವತಿಯಿಂದ ಪ್ರವಾದಿಗಳು, ಸಜ್ಜನರು ಹಾಗೂ ಔಲಿಯಾಗಳಿಗೆ ಸಿಗಲಿರುವ ಒಂದು ಗೌರವವಾಗಿದೆ. ಅದು ಕೂಡಾ ಅಲ್ಲಾಹನು ಎಲ್ಲರನ್ನೂ ವಿಚಾರಣೆ ನಡೆಸಿ ಅವರ ತೀರ್ಪು ನೀಡಿದ ಬಳಿಕ ಅಥವಾ ಕೆಲವರ ತೀರ್ಪನ್ನು ಕಾದಿರಿಸಿದ ಸಂದರ್ಭದಲ್ಲಿ ಅವರಿಗೆ ಶಫಾಅತಿನ ಅನುಮತಿ ದೊರೆಯುವುದು. ಯಾವ ಪಾಪಿಗಳನ್ನು ಅಲ್ಲಾಹನು ಕ್ಷಮಿಸಬೇಕೆಂದು ಬಯಸುವನೋ ಮತ್ತು ಯಾರನ್ನು ನರಕದಿಂದ ವಿಮೋಚನೆಗೊಳಿಸಬೇಕೆಂದು ತೀರ್ಮಾನಿಸಿರುವನೋ ಅವರಿಗಾಗಿ ಶಿಫಾರಸು ಮಾಡಿ ಅವರನ್ನು ಸ್ವರ್ಗಕ್ಕೆ ಒಯ್ಯುವಂತಾಗಲು ಆತನ ಕೆಲವು ವಿಶಿಷ್ಟ, ಆಪ್ತದಾಸರಿಗೆ ಈ ಪ್ರಶಸ್ತಿ ಅಥವಾ ಗೌರವ ಪ್ರದಾನ ಮಾಡಲಾಗುವುದು ಪ್ರವಾದಿ ಮುಹಮ್ಮದ್(ಸ) ಅವರಿಗೆ ಪರಲೋಕದಲ್ಲಿ ಅತ್ಯುನ್ನತ ಪದವಿ ನೀಡಿ ಗೌರವಿಸಲಾಗುವುದು.

ಅಲ್ಲಾಹನ ಸೃಷ್ಟಿಗಳ ಪೈಕಿ ಅತ್ಯಂತ ಶ್ರೇಷ್ಠರಾದ ಅವರಿಗೆ ನೀಡಲಿರುವ ಸ್ಥಾನವು ಮಕಾಮು ಮಹ್ಮೂದ್(ಪ್ರತಿಷ್ಠಿತ ಸ್ಥಾನ) ಆಗಿರುವುದು. ಆ ಸ್ಥಾನವು ಪರಲೋಕದಲ್ಲಿ ಕೇವಲ ಒಬ್ಬರಿಗೆ ಸಿಗುವುದು. ಅದು ಬಹುಶಃ ನಾನೇ ಆಗಿರಬಹುದೆಂದು ಪ್ರವಾದಿ(ಸ) ಹೇಳಿದ್ದಾರೆ. ಜನರ ಕರ್ಮಗಳ ವಿಚಾರಣೆಯೇ ಆರಂಭವಾಗದಿದ್ದು, ಮಹ್‌ಶರದ ಬಟ್ಟ ಬಯಲಲ್ಲಿ ಜನರು ಕಂಗಾಲಾಗಿರುವಾಗ ಜನರ ಅಪೇಕ್ಷೆ ಮೇರೆಗೆ ವಿಚಾರಣೆ ಆರಂಭಿಸಲಿಕ್ಕಾಗಿ ಅವರು ಅಲ್ಲಾಹನ ಬಳಿ ಶಿಫಾರಸು ಮಾಡುವರು. ಅವರ ಶಫಾಅತ್‌ನ ನಂತರವೇ ಮನುಷ್ಯರ ಕರ್ಮಗಳ ವಿಚಾರಣೆ ನಡೆಯುವುದು ಅಥವಾ ಅವರಿಗೆ ಅಂದು ಶಫಾಅತ್‌ನ ಅನುಮತಿ ಸಿಗುವುದು. ಇದರ ವಿವರ ಮುಂದೆ ಬರಲಿದೆ. ಪ್ರವಾದಿ(ಸ) ಕೂಡಾ ಅಲ್ಲಾಹನ ಅನುಮತಿ ಯಿಲ್ಲದೆ ಶಿಫಾರಸು ಮಾಡಲಾರರು. ಶಫಾಅತ್‌ನ ಉದ್ದೇಶ ಅಲ್ಲಾಹನ ತೀರ್ಮಾನಗಳನ್ನು ಬದಲಾಯಿಸುವುದಲ್ಲ. ಬದಲಾಗಿ ಶಿಫಾರಸು ಮಾಡುವ ಪ್ರವಾದಿಗಳು ಮತ್ತು ಸಜ್ಜನರಿಗೆ ಗೌರವ ನೀಡುವುದಾಗಿದೆ. ಯಾರನ್ನು ಅಲ್ಲಾಹನು ಗೌರವಿಸ ಬಯಸುತ್ತಾನೋ ಅವರಿಗೆ ಶಿಫಾರಸು ಮಾಡುವ ಅನುಮತಿ ನೀಡುವನು. ಅವರು ಕೂಡಾ ತಮ್ಮಿಚ್ಛೆಯಂತೆ ಯಾರ ಪರವಾಗಿ ಬೇಕಾದರೂ ಶಿಫಾರಸು ಮಾಡಲಾರರು. ಬದಲಾಗಿ ಅವರು ಅಲ್ಲಾಹನ ಇಚ್ಛೆಯ ಪ್ರಕಾರ, ಅವನು ಅನುಮತಿ ನೀಡಿದ ಪಾಪಿಗಳ ಪರವಾಗಿ ಮಾತ್ರ ಶಿಫಾರಸು ಮಾಡುವರು.

## ಶಫಾಅತ್‌ನ ಇಸ್ಲಾಮಿ ಕಲ್ಪನೆ

ಪ್ರವಾದಿ ಮುಹಮ್ಮದ್(ಸ) ಈ ಲೋಕದಲ್ಲೂ ಪರಲೋಕದಲ್ಲೂ ಪ್ರವಾದಿಗಳ ನೇತಾರರಾಗಿದ್ದಾರೆ. ಪರಲೋಕದಲ್ಲಿ ವಿಚಾರಣೆಯ ಆರಂಭವು ಅವರ ಕೋರಿಕೆಯಿಂದಲೇ ಆಗುವುದೆಂದು ಮೇಲೆ ಹೇಳಿದೆಯಷ್ಟೆ. ಬುಖಾರಿ ಮತ್ತು ಮುಸ್ಲಿಮ್ ಹದೀಸ್ ಗ್ರಂಥಗಳಲ್ಲಿ ಉದ್ಧೃತವಾಗಿರುವ ಸುದೀರ್ಘ ಹದೀಸೊಂದರಲ್ಲಿ ಅದರ ವಿವರಗಳು ಸಿಗುತ್ತವೆ. ಅದರಿಂದ ಶಫಾಅತ್‌ನ ನೈಜ ಇಸ್ಲಾಮಿ ಕಲ್ಪನೆಯನ್ನು ಗ್ರಹಿಸಬಹುದು. ಅದನ್ನು ಸಂಕ್ಷೇಪಿಸಿ ಇಲ್ಲಿ ಕೊಡಲಾಗಿದೆ.

ಅಬೂ ಹುರೈರಾ(ರ) ಹೇಳುತ್ತಾರೆ- ಪ್ರವಾದಿ(ಸ) ಹೇಳಿದರು: ಅಲ್ಲಾಹನು ಸಕಲ ಮಾನವರನ್ನು ಪರಲೋಕದಲ್ಲಿ ಒಂದು ವಿಶಾಲವಾದ ಬಟ್ಟ ಬಯಲಲ್ಲಿ(ಮಹ್‌ಶರಃ) ಒಟ್ಟುಗೂಡಿಸುವನು. ಅಲ್ಲಿನ ದೃಶ್ಯವು, ಕರೆಯುವವನು ಸುಲಭದಲ್ಲಿ ಕರೆಯಲು ಮತ್ತು ನೋಡುವವನು ಸುಲಭದಲ್ಲಿ ನೋಡಲು ಆಗುವ ರೀತಿಯಲ್ಲಿರುವುದು. ಜನರು ಅತ್ಯಂತ ಕಠಿಣ ತೊಂದರೆ, ಸಂಕಷ್ಟಗಳಲ್ಲಿರುವರು. ಸಹಿಸಲಾಗದ ಈ ಸ್ಥಿತಿಯಲ್ಲಿ ಅವರು ಪರಸ್ಪರರೊಂದಿಗೆ, ಎಂತಹ ಕಷ್ಟ ಬಂದೊದಗಿದೆ, ನಮ್ಮ ವಿಚಾರಣೆ ಆರಂಭಿಸಲಿಕ್ಕಾಗಿ ಅಲ್ಲಾಹನ ಬಳಿ ಶಿಫಾರಸು ಮಾಡಲಿಕ್ಕಾಗಿ ಯಾರಾದರೊಬ್ಬರನ್ನು ಹುಡುಕೋಣವೇ ಎಂದು ಹೇಳುವರು. ತರುವಾಯ ಅವರು ಪರಸ್ಪರ ಸಮಾಲೋಚಿಸಿ ಮಾನವರ ಆದಿಪಿತ ಪ್ರವಾದಿ ಆದಮರ(ಅ) ಬಳಿ ಹೋಗಲು ನಿರ್ಧರಿಸಿದರು. ಹಾಗೆ ಅವರು ಆದಮರ ಬಳಿಗೆ ಹೋಗಿ ಹೀಗೆ ಹೇಳುವರು- ಸಕಲ ಮಾನವರ ತಂದೆಯೇ! ಅಲ್ಲಾಹನು ತಮ್ಮನ್ನು ತನ್ನ ಕೈಯಾರೆ

ಸೃಷ್ಟಿಸಿರುವನು. ಅದಕ್ಕೆ ತನ್ನ ಆತ್ಮವನ್ನೂದಿದನು ದೇವಚರರಿಂದ ತಮಗೆ ಸಾಷ್ಟಾಂಗ ವೆರಗಿಸಿದನು. ಇಂದು ತಾವು ನಮ್ಮ ಪರವಾಗಿ ಶಫಾಅತ್ ಮಾಡಿರಿ. ಆದಮ್(ಅ) ಹೇಳುವರು- ಇಂದು ನನ್ನ ಪ್ರಭು ಎಲ್ಲಿಲ್ಲದ ಕೋಪದಲ್ಲಿದ್ದಾನೆ. ಅಂತಹ ಕೋಪ ಅವನಿಂದ ಹಿಂದೆಂದೂ ಪ್ರಕಟಗೊಂಡಿಲ್ಲ. ಮುಂದೆಯೂ ಪ್ರಕಟಗೊಳ್ಳಲಾರದು. ಒಂದು ಮರದ ಬಳಿಗೆ ಹೋಗದಂತೆ ಅಲ್ಲಾಹನು ನನ್ನನ್ನು (ಸ್ವರ್ಗದಲ್ಲಿ) ತಡೆದಿದ್ದನು. ಆದರೆ ನಾನು ಅವನ ಆಜ್ಞೆಯನ್ನು ಉಲ್ಲಂಘಿಸಿ ಬಿಟ್ಟೆ. ಇಂದು ನನಗೆ ನನ್ನದೇ ಚಿಂತೆ ಕಾಡುತ್ತಿದೆ. (ಓ ಅಲ್ಲಾಹ್! ನನ್ನನ್ನು ಕ್ಷಮಿಸು) ಆದ್ದರಿಂದ ನೀವು ನೂಹರ(ಅ) ಬಳಿಗೆ ಹೋಗಿರಿ.

ಜನರು ನೂಹರ(ಅ) ಬಳಿಗೆ ಹೋಗಿ, ತಾವು ಜನರ ಪಾಲಿಗೆ ಪ್ರಪ್ರಥಮ ಸಂದೇಶವಾಹಕರಾಗಿದ್ದೀರಿ. ಅಲ್ಲಾಹನು ತಮ್ಮನ್ನು ಕೃತಜ್ಞ ದಾಸನೆಂದು ವರ್ಣಿಸಿದ್ದಾನೆ. ಇಂದು ತಾವು ನಮಗಾಗಿ ತಮ್ಮ ಪ್ರಭುವಿನ ಬಳಿ ಶಿಫಾರಸು ಮಾಡಿರಿ ಎಂದು ಹೇಳುವರು. ಆಗ ಅವರು ಆದಮರಂತೆಯೇ ಉತ್ತರಿಸುವರು. ತಮ್ಮ ಜನಾಂಗದವರನ್ನು ಶಪಿಸಿ ನಾಶಪಡಿಸಿದ್ದನ್ನು ನೆನಪಿಸಿ, ಜನರನ್ನು ಇಬ್ರಾಹೀಮರ(ಅ) ಬಳಿಗೆ ಹೋಗುವಂತೆ ಹೇಳುವರು.

ಜನರು ಇಬ್ರಾಹೀಮರ(ಅ) ಬಳಿಗೆ ಹೋಗಿ, ತಾವು ಅಲ್ಲಾಹನ ಆಪ್ತರಾಗಿದ್ದೀರಿ. ಆದ್ದರಿಂದ ನಮಗಾಗಿ ಶಿಫಾರಸು ಮಾಡಿರಿ ಎಂದು ಹೇಳುವರು. ಆಗ ಅವರು ತಾನು ಮಾಡಿದ್ದ ಒಂದು ತಪ್ಪನ್ನು ನೆನಪಿಸುತ್ತಾ, (ಸತ್ಯ ನಿಷೇಧಿ ತಂದೆಗಾಗಿ ಪ್ರಾರ್ಥಿಸಿದ್ದು) ನೀವು ಮೂಸಾರ ಬಳಿಗೆ ಹೋಗಿರಿ ಎನ್ನುವರು. ಜನರು ಮೂಸಾರ ಬಳಿಗೆ ಹೋಗಿ ಬಿನ್ನವಿಸಿದಾಗ ಅವರು ತಾನು ಪ್ರಮಾದವಶಾತ್ ಓರ್ವನನ್ನು ವಧಿಸಿದ್ದನ್ನು ನೆನಪಿಸುತ್ತಾ, ಹಿಂದಿನ ಮೂವರು ಹೇಳಿದಂತೆಯೇ ಹೇಳಿದರು. ತರುವಾಯ ನೀವು ಈಸಾರ(ಅ) ಬಳಿಗೆ ಹೋಗಿರಿ ಎಂದು ಹೇಳಿ ಕಳಿಸಿದರು. ಹಾಗೆ ಜನರು ಈಸಾರ(ಅ) ಬಳಿಗೆ ಹೋಗಿ, ತಾವು ಅಲ್ಲಾಹನ ಸಂದೇಶವಾಹಕರು, ಆತನ ಅಪ್ಪಣೆ ಮತ್ತು ಆತನ ಆತ್ಮವಾಗಿದ್ದೀರಿ. ಆದ್ದರಿಂದ ಅಲ್ಲಾಹನ ಬಳಿ ನಮಗಾಗಿ ಶಿಫಾರಸು ಮಾಡಿರಿ ಎನ್ನುವರು. ಈಸಾ ಹೇಳುವರು- ನನ್ನ ಪ್ರಭು ಇಂದು ಎಲ್ಲಿಲ್ಲದ ಕೋಪದಲ್ಲಿದ್ದಾನೆ. ಅಯ್ಯೋ! ನನ್ನ ಅವಸ್ಥೆಯೇ ಎನ್ನುತ್ತಾ (ಈಸಾ(ಅ) ಯಾವುದೇ ತಪ್ಪು ಮಾಡಿದುದನ್ನು ಪ್ರವಾದಿ(ಸ) ಪ್ರಸ್ತಾಪಿಸಲಿಲ್ಲ) ನೀವು ಮುಹಮ್ಮದ್‌ರ(ಸ) ಬಳಿಗೆ ಹೋಗಿರಿ ಎಂದು ಹೇಳಿ ಅವರನ್ನು ಕಳಿಸುವರು.

ಆಗ ಜನರು ನನ್ನ ಬಳಿಗೆ ಬರುವರು. ಅವರು ನನ್ನೊಂದಿಗೆ ಹೇಳುವರು- 'ತಾವು ಅಲ್ಲಾಹನ ಸಂದೇಶವಾಹಕರೂ ಪ್ರವಾದಿಗಳಲ್ಲಿ ಕೊನೆಯವರೂ ಆಗಿರುವಿರಿ. ಅಲ್ಲಾಹನು ತಮ್ಮ ಹಿಂದಿನ ಮತ್ತು ಮುಂದಿನ ಎಲ್ಲ ಪಾಪಗಳನ್ನೂ ಕ್ಷಮಿಸಿದ್ದಾನೆ. ತಾವು ನಮಗಾಗಿ ತಮ್ಮ ಪ್ರಭುವಿನಲ್ಲಿ ಶಿಫಾರಸು ಮಾಡಿರಿ.' ಆಗ ನಾನು ಮಹ್‌ಶರದಿಂದ ಹೊರಟು ಅರ್ಶ್‌ನ ಕೆಳಗೆ ಹೋಗಿ ನನ್ನ ಪ್ರಭುವಿನ ಮುಂದೆ ಸಾಷ್ಟಾಂಗದಲ್ಲಿ ಬೀಳುವೆ. ಆ ಸಂದರ್ಭದಲ್ಲಿ ಹಿಂದೆಂದೂ ಯಾರಿಗೂ ಕಲಿಸಿರದಂತಹ, ಅಲ್ಲಾಹನು ಅವನನ್ನು ಸ್ತುತಿಸುವ, ಪದಗಳನ್ನು ನನ್ನ ಹೃದಯಕ್ಕಿಳಿಸುವನು. ಆತನು ಬಯಸುವ ವರೆಗೂ ನಾನು ಸಾಷ್ಟಾಂಗದಲ್ಲೇ

ಬಿದ್ದಿರುವೆನು. ತರುವಾಯ ಅಲ್ಲಾಹನು ಹೇಳುವನು- "ಓ ಮುಹಮ್ಮದ್! ತಲೆಯೆತ್ತು ಕೇಳಬೇಕಾದುದನ್ನು ಕೇಳು. ನಿನ್ನ ಶಿಫಾರಸು ಸ್ವೀಕರಿಸಲಾಗುವುದು." ಹೀಗೆ ಅಲ್ಲಾಹನು ನನಗೆ ಅನುಮತಿ ನೀಡಿದ ಬಳಿಕ ನಾನು ಶಿಫಾರಸು ಮಾಡುವೆನು. ಆಗ ನನಗೆ ಒಂದು ನಿರ್ದಿಷ್ಟ ಸಂಖ್ಯೆ ಜನರನ್ನು ನರಕದಿಂದ ಹೊರತೆಗೆದು ಸ್ವರ್ಗಕ್ಕೆ ಕಳಿಸಲು ಹೇಳಲಾಗುವುದು.

ತರುವಾಯ, ನಾನು ಇನ್ನೊಮ್ಮೆ ಸಾಷ್ಟಾಂಗವೆರಗುವೆ. ಅಲ್ಲಾಹನು ಬಯಸುವ ತನಕವೂ ನನ್ನ ಸಾಷ್ಟಾಂಗ ಮುಂದುವರಿಯುವುದು. ತರುವಾಯ ಅಪ್ಪಣೆಯಾಗುವುದು. 'ಓ ಮುಹಮ್ಮದ್! ತಲೆಯೆತ್ತು. ಹೇಳಬೇಕಾದುದನ್ನು ಹೇಳು, ಆಲಿಸಲಾಗುವುದು, ನಿನ್ನ ಬೇಡಿಕೆಯನ್ನು ಮುಂದಿಡು. ಈಡೇರಿಸಲಾಗುವುದು. ಶಿಫಾರಸು ಮಾಡು, ಸ್ವೀಕರಿಸ ಲಾಗುವುದು.' ಆಗ ನನಗೆ ಪುನಃ ಒಂದು ನಿರ್ದಿಷ್ಟ ಸಂಖ್ಯೆಯ ಜನರನ್ನು ನರಕದಿಂದ ವಿಮೋಚಿಸಿ ಸ್ವರ್ಗಕ್ಕೆ ಒಯ್ಯುವಂತೆ ಆಜ್ಞಾಪಿಸಲಾಗುವುದು. ಇದೇ ರೀತಿ ಮೂರು, ನಾಲ್ಕು ಬಾರಿ ನಡೆಯುವುದು. ಶಿಫಾರಸು ಮಾಡಿ ಅದು ಈಡೇರಿದ ನಂತರ ಪ್ರವಾದಿ(ಸ) ಹೇಳುವರು. ಯಾ ಅಲ್ಲಾಹ್! ಇನ್ನು ನರಕದಲ್ಲಿ ಕಾಫಿರರ ಹೊರತು ಯಾವೊಬ್ಬ ವಿಶ್ವಾಸಿಯೂ ಉಳಿದಿಲ್ಲ. (ಬುಖಾರಿ, ಮುಸ್ಲಿಮ್)

ಶಫಾಅತ್‌ಗೆ ಸಂಬಂಧಿಸಿದ ಈ ಅಧಿಕೃತ ಹದೀಸಿನಿಂದ ಮಹತ್ವದ ಕೆಲವು ಅಂಶಗಳನ್ನು ನಾವು ಗ್ರಹಿಸಬಹುದು.

(ಅ) ಅಲ್ಲಾಹನ ಕೋಪ-ತಾಪಗಳು ಕಿಯಾಮತ್‌ನಂದು ಎಷ್ಟೊಂದು ತೀವ್ರವಾಗಿರು ವುದೆಂದರೆ ಮಹಾಮಹಾ ಪ್ರವಾದಿಗಳಿಗೂ ಕೂಡಾ ಅವನ ಮುಂದೆ ನಿಂತು ಶಿಫಾರಸು ಮಾಡುವ ಧೈರ್ಯವಿರಲಾರದು. ಅವನ ಹಿಡಿತದ ಭಯದಿಂದ ಎಲ್ಲ ಪ್ರವಾದಿಗಳೂ ಕಂಪಿಸುತ್ತಿರುವರು. ಪ್ರತಿಯೊಬ್ಬರಿಗೂ ತನ್ನದೇ ಚಿಂತೆ ಕಾಡುತ್ತಿರುವುದು. ಧೈರ್ಯಶಾಲಿಗಳಾದ, ಪ್ರತಾಪವಂತರಾದ ಮಹಾನ್ ಪ್ರವಾದಿಗಳ ಅವಸ್ಥೆಯೇ ಹಾಗಿರುವಾಗ, ಸಮುದಾಯದ ಸಾಮಾನ್ಯ ಔಲಿಯಾಗಳು, ಸಜ್ಜನರು ಮತ್ತು ಹುತಾತ್ಮರ ಸ್ಥಿತಿಯೇನಾಗಿರಬಹುದೆಂಬುದನ್ನು ವಿವರಿಸುವ ಅಗತ್ಯವಿಲ್ಲ. ಹಾಗಿರುವಾಗ ಯಾರಾದರೂ, ನನ್ನ ಶೇಖ್, ನನ್ನ ಪೀರ್ ಅಥವಾ ಇಂತಿಂತಹ ಮಹಾನುಭಾವರು, ಔಲಿಯಾಗಳು ನನ್ನ ಪರವಾಗಿ ಶಿಫಾರಸು ಮಾಡುವರೆಂದು ಭಾವಿಸುವುದು ಎಂತಹ ಮೂರ್ಖತನ? ನಿಜವಾಗಿ ಅವರೇ ಅಲ್ಲಾಹನ ಮುಂದೆ ವಿಚಾರಣೆಗೆ ನಿಂತಿರುವಾಗ, ಇನ್ನೊಬ್ಬನು ಹೋಗಿ ಅವರೊಂದಿಗೆ ತನ್ನನ್ನು ಪಾರು ಮಾಡುವಂತೆ ವಿನಂತಿಸುವುದಾದರೂ ಹೇಗೆ? ಇದರಿಂದ ತಾನೇ ನಿರಾಶಗೊಳಗಾಗುವುದಲ್ಲದೆ ಅವನಿಗೆ ಇನ್ನೇನು ದಕ್ಕೀತು?

(ಆ) ಪ್ರವಾದಿ ಮುಹಮ್ಮದ್(ಸ) ಅತ್ಯುನ್ನತ ಸ್ಥಾನವಾಗಿರುವ 'ಮಕಾಮು ಮಹ್ಮೂದ್' ನಲ್ಲಿರುವುದರ ಹೊರತಾಗಿಯೂ ಅವರು ಅಲ್ಲಾಹನ ಅನುಮತಿಯಿಲ್ಲದೆ ಶಿಫಾರಸು ಮಾಡಲಾರರು. ಅಷ್ಟೇ ಅಲ್ಲ, ಶಫಾಅತ್‌ನ ಅನುಮತಿಗಾಗಿ ಅನಿರ್ದಿಷ್ಟಾವಧಿಯ ವರೆಗೆ ಅವರು ಸಾಷ್ಟಾಂಗದಲ್ಲಿ ಬಿದ್ದು ಅಲ್ಲಾಹನನ್ನು ಸ್ತುತಿಸುತ್ತಲೇ ಇರುವರು. ಕೊನೆಗೂ

ಅಲ್ಲಾಹನು ಇಚ್ಛಿಸಿದಾಗ ಅವರಿಗೆ ಅನುಮತಿ ಸಿಗುವುದು. ಅಲ್ಲಾಹನ ಪ್ರವಾದಿಯವರ(ಸ) ಸ್ಥಿತಿಯೇ ಹೀಗಿರುವಾಗ, ಒಬ್ಬನು ತಾನೇ ನೇಮಿಸಿಕೊಂಡ ಮುರ್ಶದ್‌ನ ಶೇಖ್‌ನ ಮುಂದೆ ಹರಕೆ ಕಾಣಿಕೆಗಳನ್ನು ಒಪ್ಪಿಸಿ, ತನ್ನ ಶಫಾಅತ್‌ನ ವ್ಯವಸ್ಥೆ ಆಗಿ ಬಿಟ್ಟಿತು ಎಂದು ಭಾವಿಸುವುದು ಅಥವಾ ಪರಲೋಕದಲ್ಲಿ ಅವರು ಅಲ್ಲಾಹನೊಂದಿಗೆ ಜಗಳಾಡಿ ಅಥವಾ ಕೋಪಗೊಂಡು ತನ್ನ ಮುರೀದ್‌ಗಳಿಗೆ ಕ್ಷಮೆ ಕೊಡಿಸುವರೆಂಬ ಭ್ರಮೆಗೊಳಗಾಗುವುದು ಎಂತಹ ಅವಿವೇಕವಾಗಿದೆ?

(ಇ) ಪ್ರವಾದಿವರ್ಯರಿಗೆ(ಸ) ಅಲ್ಲಾಹನು ಪಾಪಿಗಳನ್ನು ನರಕದಿಂದ ಹೊರ ತೆಗೆಯುವ ಅನುಮತಿ ನೀಡುವನು. ಆದರೆ ಅವರಿಗೆ ಇಷ್ಟವಿರುವಷ್ಟು ಮಂದಿಯನ್ನು ಹೊರ ತೆಗೆಯುವ ಅನುಮತಿ ನೀಡಲಾರನು. ಬದಲಾಗಿ ಅದಕ್ಕೆ ಒಂದು ಮಿತಿ ನಿಶ್ಚಯಿಸಲಾಗುವುದು. ಅದನ್ನು ಮೀರುವ ಅಧಿಕಾರ ಪ್ರವಾದಿಯವರಿಗಿಲ್ಲ. ಈಗ ಅಲ್ಲಾಹನು ಒಬ್ಬ ಮುರ್ಶಿದ್‌ನಿಗೆ ಕೆಲವು ಮಂದಿಯ ಪರವಾಗಿ ಶಿಫಾರಸು ಮಾಡಲು ಅನುಮತಿ ನೀಡಿದನೆಂದಿಟ್ಟು ಕೊಳ್ಳೋಣ. ಆದರೆ ಆತ ಅದು ಸಾಲದು, ನನಗೆ ಸಾವಿರಾರು ಸಂಖ್ಯೆಯ ಮುರೀದ್ ಗಳಿದ್ದಾರೆ, ಎಲ್ಲರ ಪರವಾಗಿಯೂ ಶಿಫಾರಸು ಮಾಡಲು ಅನುಮತಿ ನೀಡಬೇಕೆಂದು ವಾದಿಸುವುದಾದರೆ, ಅದು ಅಲ್ಲಾಹ್ ಮತ್ತು ಪ್ರವಾದಿಯವರ(ಸ) ವಿರುದ್ಧ ಉದ್ಧಟತನ ವಲ್ಲವೆ? ಇಂತಹ ಅಸಂಬದ್ಧ ಕಲ್ಪನೆಯೇ ಅಪಾಯಕಾರಿಯಾಗಿದೆ.

(ಈ) ಶಫಾಅತ್‌ನ ಪ್ರಯೋಜನ ಕೇವಲ ವಿಶ್ವಾಸಿಗಳಾಗಿದ್ದು, ಪಾಪ ಮಾಡಿ ಮರಣ ಹೊಂದಿದವರಿಗೆ ಮಾತ್ರ ಇರುವುದು. ಮನಸ್ಸಿನಲ್ಲಿ ವಿಶ್ವಾಸವೇ ಇಲ್ಲದಿದ್ದವರಿಗೆ ಈ ಶಫಾಅತ್ ಅನ್ವಯಿಸಲಾರದು. ಆದ್ದರಿಂದ ಪಾಪಿಗಳಾದ ಎಲ್ಲ ವಿಶ್ವಾಸಿಗಳನ್ನು ನರಕದಿಂದ ವಿಮೋಚಿಸಿದ ಬಳಿಕ ಪ್ರವಾದಿ(ಸ) ಮುಶ್ರಿಕರು ಮತ್ತು ಕಾಫಿರ್‌ಗಳಿಗಾಗಿ ಶಿಫಾರಸು ಮಾಡಲಾರರು. ಪ್ರವಾದಿ(ಸ) ಹೇಳುವರು- ಯಾ ಅಲ್ಲಾಹ್! ಇನ್ನು ನರಕದಲ್ಲಿ, ಕುರ್‌ಆನ್ ತಡೆದಿರುವವರ- ಅಂದರೆ ಮುಶ್ರಿಕರು ಮತ್ತು ಕಾಫಿರರು- ಹೊರತು ಯಾರೂ ಉಳಿದಿಲ್ಲ."

(ಬುಖಾರಿ, ಮುಸ್ಲಿಮ್)

(ಉ) ಶಫಾಅತ್‌ನ ಪ್ರಕ್ರಿಯೆ ಆರಂಭಗೊಂಡು ಅದು ಮುಗಿಯುವ ವರೆಗೆ- ಅಂದರೆ ಅತ್ಯಂತ ಕೊನೆಯ ಪಾಪಿಯೂ ಹೊರ ಬರುವ ವರೆಗೆ - ಎಷ್ಟು ವರ್ಷಗಳು ತಾಗುವುವು ಎಂಬುದನ್ನು ಊಹಿಸುವುದು ನಮ್ಮಿಂದ ಸಾಧ್ಯವಿಲ್ಲ. ಅದು ಸಾವಿರ ಲಕ್ಷ ಅಥವಾ ಕೋಟ್ಯಾನುಗಟ್ಟಳೆ ವರ್ಷಗಳೂ ಆಗಬಹುದು. ಆದ್ದರಿಂದ ಶಫಾಅತ್‌ನ ನಿರೀಕ್ಷೆಯಿಂದ ಪಾಪಗಳನ್ನು ಮಾಡುತ್ತಲೇ ಇರುವುದು ಬಹಳ ಗಂಡಾಂತರಕಾರಿಯಾಗಿದೆ. ಏಕೆಂದರೆ ನರಕದಲ್ಲಿ ಒಂದು ಬಾರಿ ಒಬ್ಬನನ್ನು ಮುಳುಗಿಸಿ ತೆಗೆದರೆ ಅವನು ಲೋಕದಲ್ಲಿ ಅನುಭವಿಸಿದ ಎಲ್ಲ ಸುಖ ಸಂತೋಷಗಳನ್ನು ಮರೆತು ಬಿಡುವನೆಂದು ಹದೀಸ್‌ಗಳಿಂದ ತಿಳಿದು ಬರುತ್ತದೆ.

ಅನಸ್‌ರವರ(ರ) ಒಂದು ವರದಿಯ ಪ್ರಕಾರ, ಪ್ರವಾದಿ(ಸ) ಹೇಳಿದರು- ಕಿಯಾಮತ್ ನಂದು ಈ ಲೋಕದಲ್ಲಿ ಅತ್ಯಂತ ಸಂಪನ್ನನಾಗಿದ್ದು ಸುಖಾಡಂಬರಗಳಿಂದ ಬದುಕಿದ್ದ

ಒಬ್ಬನನ್ನು ತಂದು ನರಕದಲ್ಲಿ ಒಮ್ಮೆ ಮುಳುಗಿಸಿ ತೆಗೆಯಲಾಗುವುದು. ತರುವಾಯ ಅವನೊಂದಿಗೆ, ಓ ಮಾನವಾ! ನೀನೆಂದಾದರೂ ಸುಖವನ್ನು ಕಂಡಿರುವೆಯಾ ಎಂದು ಕೇಳಲಾಗುವುದು. ಆತ ಹೇಳುವನು- ಅಲ್ಲಾಹನಾಣೆ, ಇಲ್ಲ ಪ್ರಭೂ!

ನುಅ್‌ಮಾನ್ ಬಿನ್ ಬಶೀರ್(ರ) ಉಲ್ಲೇಖಿಸಿರುವ ಒಂದು ಹದೀಸ್‌ನಲ್ಲಿ ಹೀಗಿದೆ: ಪ್ರವಾದಿ(ಸ) ಹೇಳಿದರು- ನರಕದವರ ಪೈಕಿ ಒಬ್ಬನಿಗೆ ಅತ್ಯಂತ ಹಗುರ ಶಿಕ್ಷೆ ನೀಡಲಾಗುವುದು. ಅವನಿಗೆ ಬೆಂಕಿಯ ಪಾದರಕ್ಷೆ ತೊಡಿಸಲಾಗುವುದು. ಅದರಿಂದ ಅವನ ಮೆದುಳು (ಒಲೆಯಲ್ಲಿ) ನೀರು ಕುದಿಯುವಂತೆ ಕುದಿಯುತ್ತಿರುವುದು, ತನಗಿಂತ ಹೆಚ್ಚು ಶಿಕ್ಷೆ ಯಾರಿಗೂ ಸಿಕ್ಕಿರಲಾರದೆಂದು ಅವನು ಭಾವಿಸುವನು. ವಸ್ತುತಃ ಅವನ ಶಿಕ್ಷೆಯು ಎಲ್ಲ ನರಕವಾಸಿಗಳ ಶಿಕ್ಷೆಗಿಂತ ಕಡಿಮೆಯಾಗಿರುವುದು.

ಕೇವಲ ಒಂದು ಬಾರಿ ಮುಳುಗಿ ಏಳುವುದು ಕೂಡಾ ನರಕದಲ್ಲಿ ಸಹಿಸಲು ಸಾಧ್ಯವಿಲ್ಲವೆಂದಿರುವಾಗ ವರ್ಷಾನುಗಟ್ಟಳೆ ಶಿಕ್ಷೆ ಅನುಭವಿಸುವುದಾದರೂ ಹೇಗೆ? ಆದ್ದರಿಂದ ಶಿಫಾರಸಿನ ಮೂಲಕ ನರಕದಿಂದ ಮುಕ್ತಿ ಪಡೆಯಬಹುದೆಂಬ ಶುಭ ನಿರೀಕ್ಷೆಯಲ್ಲಿ ಯಾರೂ ಇರಬಾರದು. (ಅಲ್ಲಾಹನು ನಮ್ಮೆಲ್ಲರನ್ನು ನರಕ ಶಿಕ್ಷೆಯಿಂದ ರಕ್ಷಿಸಲಿ) ಒಟ್ಟಿನಲ್ಲಿ ಅಲ್ಲಾಹನ ಗ್ರಂಥ ಮತ್ತು ಪ್ರವಾದಿ ವಚನಗಳಿಂದ ಸಾಬೀತಾದ ಈ ಇಸ್ಲಾಮೀ ಶಫಾಅತ್‌ನ ಕಲ್ಪನೆಯ ಹೊರತಾದ ಎಲ್ಲ ಕಲ್ಪನೆಗಳೂ ಮಿಥ್ಯವೂ ಇಸ್ಲಾಮೀ ಶಿಕ್ಷಣ ಗಳಿಗೆ ವಿರುದ್ಧವೂ ಆಗಿದೆ.

ಆಯತುಲ್ ಕುರ್ಸೀಯಲ್ಲಿ ಶಫಾಅತ್‌ನ ಕುರಿತು ಪ್ರಸ್ತಾಪಿಸಿದ ನಂತರ, "ದಾಸರ ಮುಂದಿರುವುದನ್ನೂ ಅವರಿಂದ ಮರೆಯಾಗಿರುವುದನ್ನೂ ಆತನು ಬಲ್ಲನು" ಎಂದು ಹೇಳಲಾಗಿದೆ. ಅಂದರೆ ಅಲ್ಲಾಹನು ಮಾನವನ ಹಿಂದಿನ ಮತ್ತು ಮುಂದೆ ಸಂಭವಿಸಲಿರುವ ಎಲ್ಲ ವಿಷಯಗಳನ್ನೂ ಬಲ್ಲವನಾಗಿದ್ದಾನೆ. ಇದರ ಇನ್ನೊಂದರ್ಥ ಮಾನವನು ಹುಟ್ಟುವುದಕ್ಕಿಂತ ಮುಂಚಿನ ಮತ್ತು ಅವನು ಹುಟ್ಟಿದ ನಂತರದ ಎಲ್ಲ ಘಟನಾವಳಿ ಗಳನ್ನೂ ಅರಿತವನಾಗಿದ್ದಾನೆ. ಮುಂದೆ ಎಂಬುದರ ಅರ್ಥ ಮಾನವನ ಅನುಭವಕ್ಕೆ ಬರುವಂತಹ ಪ್ರತ್ಯಕ್ಷ ಸಂಗತಿಗಳಾಗಿರಬಹುದು. ಹಿಂದೆ ಎಂದರೆ ಅವನಿಂದ ಮರೆಯಾಗಿರುವ, ಅವನಿಗೆ ಗೋಚರಿಸದ ಅಪ್ರತ್ಯಕ್ಷ ವಸ್ತುಗಳಾಗಿರಲೂಬಹುದು. ಮಾನವನ ಜ್ಞಾನವು ಸೀಮಿತವಾಗಿರುತ್ತದೆ. ಆದ್ದರಿಂದ ಅವನಿಗೆ ಹೆಚ್ಚೇನೂ ತಿಳಿದಿರುವುದಿಲ್ಲ. ಅವನು ತನ್ನ ಕಣ್ಣ ಮುಂದಿರುವುದನ್ನು ಮಾತ್ರ ಕಾಣುತ್ತಾನೆ. ತನ್ನ ಬೆನ್ನ ಹಿಂದಿರುವುದು ಅವನಿಗೆ ಕಾಣುವುದಿಲ್ಲ. ಇನ್ನು ಒಂದು ವಸ್ತು ಅವನ ಕಣ್ಣ ಮುಂದೆಯೇ ಇದ್ದರೂ ಕತ್ತಲಾವರಿ ಸಿದರೆ ಅವನಿಗೆ ಕಾಣಲಾರದು. ಅದೇ ರೀತಿ ಅತಿ ಸೂಕ್ಷ್ಮ ವಸ್ತುಗಳು ಅವನ ಕಣ್ಣೆದುರಲ್ಲಿದ್ದರೂ ಅವನಿಗೆ ಸೂಕ್ಷ್ಮ ದರ್ಶಕದ ಸಹಾಯವಿಲ್ಲದೆ ಕಾಣಲು ಸಾಧ್ಯವಿಲ್ಲ. ಆದರೆ ಅಲ್ಲಾಹನ ಜ್ಞಾನವಾದರೋ ಅಗಾಧವಾಗಿದೆ. ಅವನ ದೃಷ್ಟಿ ಮತ್ತು ಶ್ರವಣವೂ ಅಗಾಧವಾಗಿದೆ. ಅವನು ಏಕಕಾಲದಲ್ಲಿ ಎಲ್ಲವನ್ನೂ ನೋಡುತ್ತಾನೆ. ಎಲ್ಲವನ್ನೂ ಕೇಳುತ್ತಾನೆ. ಅವನು ಎಲ್ಲವನ್ನೂ ಬಲ್ಲವನಾಗಿದ್ದಾನೆ.

"ನೀವು ಪ್ರಕಟಗೊಳಿಸುವುದನ್ನೂ ಬಚ್ಚಿಡುವುದನ್ನೂ ಅಲ್ಲಾಹನು ಅರಿಯುವನು." (24:29)

"ನಿಮ್ಮ ಮನದಿಂಗಿತಗಳನ್ನು ನೀವು ಬಹಿರಂಗಗೊಳಿಸಿದರೂ ಬಚ್ಚಿಟ್ಟರೂ ಅಲ್ಲಾಹನು ನಿಮ್ಮಿಂದ ಅವುಗಳ ಲೆಕ್ಕಾಚಾರ ಪಡೆದೇ ತೀರುವನು." (2:284)

ಮೂಸಾ ಮತ್ತು ಹಾರೂನ್(ಅ) ಫಿರ್‌ಔನನ ದರಬಾರಿಗೆ ಹೋಗಲು ಹೆದರಿದಾಗ ಅಲ್ಲಾಹನು ಹೇಳುತ್ತಾನೆ- "ಹೆದರಬೇಡಿರಿ, ನಾನು ನಿಮ್ಮ ಸಂಗಡವಿದ್ದೇನೆ. ಎಲ್ಲವನ್ನೂ ಆಲಿಸುತ್ತಿದ್ದೇನೆ ಮತ್ತು ವೀಕ್ಷಿಸುತ್ತಿದ್ದೇನೆ." (20:46)

ಅಲ್ಲಾಹನು ತ್ರಿಕಾಲ ಜ್ಞಾನಿಯಾಗಿದ್ದು ಅವನಿಗೆ ಎಲ್ಲವೂ ತಿಳಿದಿರುವಾಗ ಅವನು ತನ್ನ ಸೃಷ್ಟಿಗಳಾದ ಮಾನವರಿಗೆ ಶಿಫಾರಸು ಮಾಡಲು ಏಕೆ ಅನುಮತಿ ನೀಡುತ್ತಾನೆಂಬ ಪ್ರಶ್ನೆ ಅಪ್ರಸ್ತುತವಲ್ಲ. ಶಫಾಅತ್‌ನ ಮಿಥ್ಯ ಕಲ್ಪನೆಯನ್ನು ಖಂಡಿಸಲಿಕ್ಕಾಗಿಯೇ ಅವನು 'ದಾಸರ ಹಿಂದಿರುವುದನ್ನೂ ಮುಂದಿರುವುದನ್ನೂ ಬಲ್ಲನು' ಎಂದು ಹೇಳಿರುವುದು. ಅವನು ತನ್ನ ಪಾಪಿಗಳಾದ ದಾಸರಿಗೆ ನರಕದಲ್ಲಿ ಶಿಕ್ಷೆ ನೀಡಿದ ಬಳಿಕ ಅವರನ್ನು ಅದರಿಂದ ತೆಗೆದು ತಾನೇ ಸ್ವರ್ಗಕ್ಕೆ ಕಳಿಸಬಲ್ಲನು. ಆದರೆ ಅವನು ತನ್ನ ಕೆಲವು ದಾಸರ ಪದವಿಯನ್ನು ಹೆಚ್ಚಿಸಬಯಸಿರುವುದರಿಂದ ಅವರ ಶಿಫಾರಸಿನ ಮೂಲಕ ಅವರಿಗೆ ನರಕದಿಂದ ಮುಕ್ತಿ ನೀಡುತ್ತಾನೆ. ಯಾವ ದಾಸನಿಗೂ ಅಲ್ಲಾಹನ ಮುಂದೆ ಬಾಯ್ತೆರೆಯುವ ಧೈರ್ಯವಿರಲಾರದು. ಅಲ್ಲಾಹನ ಜ್ಞಾನದ ಯಾವುದೇ ಅಂಶವನ್ನು ಕರಗತ ಮಾಡಬಲ್ಲಂತಹ ಸ್ಥಾನಮಾನ ಯಾರಿಗೂ ಇಲ್ಲ. ದಾಸರಿಗೆ ಅವನು ನೀಡಿದಷ್ಟು ಮಾತ್ರ ಜ್ಞಾನವಿರುತ್ತದೆ. ಪವಿತ್ರ ಕುರ್‌ಆನಿನಲ್ಲಿ ಹೀಗಿದೆ- "ನಾವು ಅವನಿಗೆ ನಮ್ಮ ಅನುಗ್ರಹ ಪ್ರದಾನ ಮಾಡಿದ್ದೆವು ಮತ್ತು ನಮ್ಮ ವತಿಯಿಂದ ಒಂದು ವಿಶಿಷ್ಟ ಜ್ಞಾನವನ್ನು ದಯಪಾಲಿಸಿದ್ದೆವು." (18:65)

"ಅವನು ಅದೃಶ್ಯಜ್ಞಾನಿಯಾಗಿದ್ದಾನೆ. ತನ್ನ ಅದೃಶ್ಯ ಜ್ಞಾನವನ್ನು ಅವನು ಯಾರಿಗೂ ತಿಳಿಯಪಡಿಸುವುದಿಲ್ಲ. (ಅದೃಶ್ಯಜ್ಞಾನವನ್ನು ನೀಡಲಿಕ್ಕಾಗಿ) ತಾನು ಮೆಚ್ಚಿಕೊಂಡ, ತನ್ನ ಸಂದೇಶವಾಹಕನ ಹೊರತು." (72:26-27)

ಪ್ರವಾದಿಗಳು ಸ್ವತಃ ಪರೋಕ್ಷ ಜ್ಞಾನಿಗಳಾಗಿರುವುದಿಲ್ಲ. ಆದರೆ ಅಲ್ಲಾಹನು ಅವರನ್ನು ಪ್ರವಾದಿಯಾಗಿ ನೇಮಕ ಮಾಡುವಾಗ ತಾನಿಚ್ಛಿಸಿದ ಕೆಲವು ಜ್ಞಾನವನ್ನು ಅವರಿಗೆ ನೀಡುತ್ತಾನೆ. ಮಾನವನ ಜ್ಞಾನದ ಪರಿಮಿತಿ ಮತ್ತು ಅಲ್ಲಾಹನ ಜ್ಞಾನದ ಅಪರಿಮಿತಿಯನ್ನು ಪ್ರಸ್ತಾಪಿಸುತ್ತಾ, ಕುರ್‌ಆನ್ ಶಫಾಅತಿನ ಕಲ್ಪನೆಗೆ ಪ್ರಹಾರ ನೀಡುತ್ತದೆ. "ಅಂದು ರಹ್ಮಾನನು ಯಾರಿಗೆ ಅನುಮತಿ ನೀಡುವನೋ ಮತ್ತು ಯಾರ ಮಾತನ್ನು ಕೇಳಲು ಇಚ್ಛಿಸುವನೋ ಅವರ ಹೊರತು ಯಾರ ಶಿಫಾರಸೂ ಫಲಕಾರಿಯಾಗದು. ಅವನು ಜನರ ಮುಂದಿನ ಮತ್ತು ಹಿಂದಿನ ಎಲ್ಲ ಸ್ಥಿತಿಯನ್ನೂ ಅರಿತಿರುತ್ತಾನೆ ಮತ್ತು ಇತರರಿಗೆ ಅದರ ಸಂಪೂರ್ಣ ಜ್ಞಾನವಿಲ್ಲ." (20:109-110)

ಅನಂತರ, ಆಯತುಲ್ ಕುರ್ಸೀಯಲ್ಲಿ, "ಆತನು ಸ್ವತಃ ತಿಳಿಯಗೊಡಿಸುವ ಹೊರತು ಆತನ ಜ್ಞಾನ ಭಂಡಾರದಿಂದ ಯಾವ ವಿಷಯವನ್ನೂ ಅವರು ತಿಳಿಯಲಾರರು" ಎನ್ನಲಾಗಿದೆ.

ಅಲ್ಲಾಹನ ಜ್ಞಾನ ಎಷ್ಟು ಅಗಾಧ ಎಂಬುದು ಕುರ್‌ಆನ್-ಹದೀಸ್‌ಗಳಲ್ಲಿ ಚೆನ್ನಾಗಿ ವಿವರಿಸಲ್ಪಟ್ಟಿದೆ. ಅವನ ಜ್ಞಾನದ ಮುಂದೆ ಮಾನವನ ಜ್ಞಾನದ ಪರಿಮಾಣವು ಈ ಅಗಾಧ ಪ್ರಪಂಚದಲ್ಲಿ ಒಂದು ಬಿಂದುವಿನಷ್ಟೂ ಇಲ್ಲ. ಅಲ್ಲಾಹನು ದೇವಚರರ ಮುಂದೆ ಆದಮರ ಸೃಷ್ಟಿಯ ಕುರಿತು ಪ್ರಸ್ತಾಪಿಸಿದಾಗ ಅವರು ಆಶ್ಚರ್ಯ ಮತ್ತು ಆತಂಕ ವ್ಯಕ್ತಪಡಿಸಿದರು. ಆಗ ಅಲ್ಲಾಹನು ಹೇಳುತ್ತಾನೆ- "ವಾಸ್ತವದಲ್ಲಿ ನೀವು ಅರಿಯದುದನ್ನು ನಾನು ಅರಿತಿದ್ದೇನೆ." (2:30)

"ಅಲ್ಲಾಹನ ಜ್ಞಾನವು ಎಲ್ಲ ವಿಷಯಗಳಿಗೂ ವ್ಯಾಪಿಸಿಕೊಂಡಿದೆ." (65:12)

ಪ್ರವಾದಿ(ಸ) ತಮ್ಮ ಓರ್ವ ಪತ್ನಿಯೊಂದಿಗೆ ರಹಸ್ಯ ವಿಷಯವೊಂದನ್ನು ಹೇಳಿದ್ದನ್ನು ಅವರು (ಇನ್ನೊಬ್ಬರಿಗೆ ಹೇಳಿ) ಬಯಲುಗೊಳಿಸಿ ಬಿಟ್ಟಾಗ, ಅದರ ಸುದ್ದಿಯನ್ನು ಅಲ್ಲಾಹನು ಪ್ರವಾದಿಯವರಿಗೆ(ಸ) ನೀಡಿದನು. ಅವರು ತಮ್ಮ ಪತ್ನಿಯನ್ನು ವಿಚಾರಿಸಿದಾಗ, ಇದು ತಮಗೆ ಹೇಗೆ ತಿಳಿಯಿತೆಂದು ಅವರು ಪ್ರಶ್ನಿಸುತ್ತಾರೆ. ಆಗ ಪ್ರವಾದಿಯವರು(ಸ) "ನನಗೆ ಸರ್ವಜ್ಞನೂ ವಿವರಪೂರ್ಣನೂ ಆಗಿರುವವನು ಸುದ್ದಿ ತಿಳಿಸಿದನು" (66:3) ಎಂದು ಹೇಳುತ್ತಾರೆ.

ಮೂಸಾ(ಅ) ಖಿಝ್‌ರ್‌ರನ್ನು ಭೇಟಿಯಾಗಿ ಮಾತುಕತೆ ನಡೆಸಿದ ಸಂದರ್ಭದಲ್ಲಿ ಅವರು ಹೇಳುತ್ತಾರೆ- 'ಓ ಮೂಸಾ! ಅಲ್ಲಾಹನ ಜ್ಞಾನದ ಒಂದಂಶ ನನ್ನ ಬಳಿಯಲ್ಲಿದೆ. ಅದನ್ನು ಅವನು ನನಗೆ ದಯಪಾಲಿಸಿದ್ದಾನೆ. ಆದರೆ ಅದು ನಿಮಗೆ ತಿಳಿದಿಲ್ಲ. ಅದೇ ರೀತಿ ನಿಮ್ಮ ಬಳಿಯೂ ಅಲ್ಲಾಹನು ದಯಪಾಲಿಸಿದ ಆತನ ಜ್ಞಾನದ ಒಂದಂಶವಿದೆ. ಅದು ನನಗೂ ತಿಳಿದಿಲ್ಲ' (ಇಬ್ನು ಕಸೀರ್) ಈ ಕುರಿತು ಒಂದು ಹದೀಸ್ ಹೀಗಿದೆ:

'ಮೂಸಾ(ಅ) ಮತ್ತು ಖಿಝ್‌ರ್ ಒಂದು ನಾವೆಯಲ್ಲಿ ಪ್ರಯಾಣಿಸಲಿಕ್ಕಾಗಿ ಕಡಲ ದಂಡೆಯಲ್ಲಿ ನಿಂತಿದ್ದಾಗ, ಪುಟ್ಟ ಪಕ್ಷಿಯೊಂದು ಬಂದು ತನ್ನ ಕೊಕ್ಕನ್ನು ಸಮುದ್ರಕ್ಕೆ ಮುಳುಗಿಸಿ ತೆಗೆಯಿತು.' ಆಗ ಮೂಸಾರೊಂದಿಗೆ ಖಿಝ್‌ರ್ ಹೇಳಿದರು- 'ನನ್ನ ಜ್ಞಾನ, ನಿಮ್ಮ ಜ್ಞಾನ ಮತ್ತು ಎಲ್ಲ ಸೃಷ್ಟಿ ಜಾಲಗಳ ಜ್ಞಾನಗಳು, ಅಲ್ಲಾಹನ ಜ್ಞಾನಕ್ಕೆ ಹೋಲಿಸಿದರೆ, ಈ ಪಕ್ಷಿಯು ಸಮುದ್ರದಿಂದ ತೆಗೆದ ನೀರಿನಷ್ಟಾಗಬಹುದು.' (ಬುಖಾರಿ)

ಒಟ್ಟಿನಲ್ಲಿ ಅಲ್ಲಾಹನನ್ನು ಮೀರಿಸುವ ಜ್ಞಾನ ಎಲ್ಲೂ ಇಲ್ಲ. ಯಾರಲ್ಲೂ ಇಲ್ಲ. ಇರಲು ಸಾಧ್ಯವೂ ಇಲ್ಲ. ಆದ್ದರಿಂದ ಈ ಲೋಕದಲ್ಲಿ ಹೇಗೂ ಬದುಕಿ, ಅಲ್ಲಾಹನ ವಿಧಿ-ನಿಷೇಧಗಳನ್ನು ಉಲ್ಲಂಘಿಸಿ, ಪರಲೋಕದಲ್ಲಿ ಆತನ ಹಿಡಿತದಿಂದ ಪಾರಾಗಲಿಕ್ಕಾಗಿ ಯಾರನ್ನಾದರೂ ಶಿಫಾರಸುದಾರರನ್ನಾಗಿ ಮಾಡಿಬಿಡಬಹುದೆಂಬ ಭ್ರಮೆ ಯಾರಿಗೂ ಇರಬಾರದು. ಅವನನ್ನು ಮೋಸಗೊಳಿಸಲು, ಅವನ ಕಣ್ಣು ತಪ್ಪಿಸಿ ಪಾರಾಗಲು ಯಾರಿಂದಲೂ ಸಾಧ್ಯವಿಲ್ಲ. ಏಕೆಂದರೆ ಅವನು ಎಲ್ಲವನ್ನೂ ಬಲ್ಲವನು. ಅವನ ಜ್ಞಾನದ ಪರಿಧಿಯಿಂದ ಯಾರೂ ಹೊರಗಿಲ್ಲ. ಇಲ್ಲಿ ಶಫಾಅತ್‌ನ ಮಿಥ್ಯ ಕಲ್ಪನೆಯು ತನ್ನಿಂತಾನೇ ಕುಸಿದು ಬೀಳುತ್ತದೆ.

ಆದರೆ ಮಾನವನಿಗೆ ಜ್ಞಾನವೇ ಇಲ್ಲವೆಂದು ಇದರ ಅರ್ಥವಲ್ಲ. ಮಾನವನಿಗೆ ಜ್ಞಾನದ ಒಂದಂಶ ನೀಡಲ್ಪಟ್ಟಿದೆ. ಸಂಪೂರ್ಣ ಜ್ಞಾನ ಅವನಿಗಿಲ್ಲ. ಅದು ಕೇವಲ ಅಲ್ಲಾಹನಿಗಿರುವುದು. ಅವನು ನೀಡಿದಷ್ಟು ಜ್ಞಾನ ಮಾತ್ರ ಮಾನವನಿಗಿರುವುದು. ಪ್ರವಾದಿ ಮುಹಮ್ಮದ್(ಸ) ಅವರಿಗೆ ಅವತೀರ್ಣಗೊಂಡ ಪ್ರಪ್ರಥಮ ವಹ್ಯ್(ದಿವ್ಯವಾಣಿ)ನಲ್ಲಿ ಐದು ಸೂಕ್ತಗಳಿದ್ದುವು. ಅದರ ಕೊನೆಯ ಎರಡು ಸೂಕ್ತಗಳು ಹೀಗಿವೆ- **"ಅವನು ಲೇಖನಿಯ ಮೂಲಕ ವಿದ್ಯೆ ಕಲಿಸಿದನು. ಮಾನವನು ತಿಳಿದಿರದಂತಹ ಜ್ಞಾನವನ್ನು ಅವನಿಗೆ ದಯ ಪಾಲಿಸಿದನು." (96:4-5)** ಪ್ರವಾದಿಗಳಿಗೆ ಅಲ್ಲಾಹನು ನೇರವಾದ ಜ್ಞಾನ ನೀಡುತ್ತಾನೆ. ಆದರೆ ಇತರರಿಗೆ ಜ್ಞಾನವನ್ನು ಗುಪ್ತ ಬೋಧನೆ(ಇಲ್ಹಾಮ್)ಗಳ ಮೂಲಕ ದಯಪಾಲಿಸುತ್ತಾನೆ. ಮಾನವನಿಗೆ ಜ್ಞಾನ ನೀಡಿದಂತೆ ಇತರ ಜೀವಿಗಳಿಗೂ ಅವನೇ ಕಲಿಸುತ್ತಾನೆ. ಮೀನಿಗೆ ಈಜಾಡಲು, ಜೇನ್ನೊಣಗಳಿಗೆ ತೊಟ್ಟಿ ಕಟ್ಟಿ ಜೇನು ಸಂಗ್ರಹಿಸಲು ಕಲಿಸಿರುವುದೂ ಅವನೆ. ಆದರೆ ಮಾನವನು ಇತರ ಜೀವಿಗಳಂತಲ್ಲ, ಅವನ ಜ್ಞಾನ ವೃದ್ಧಿಗೆ ಸಾಕಷ್ಟು ಅವಕಾಶಗಳನ್ನು ಈ ಲೋಕದಲ್ಲಿ ಅಲ್ಲಾಹನು ಇಟ್ಟಿದ್ದಾನೆ. ಅದೇ ರೀತಿ ಜ್ಞಾನ ವೃದ್ಧಿಗಾಗಿ ಪ್ರಾರ್ಥಿಸುವಂತೆಯೂ ಅವನು ಆದೇಶಿಸಿದ್ದಾನೆ. **"ಓ ನನ್ನ ಪ್ರಭೂ, ನನಗೆ ಇನ್ನಷ್ಟು ಜ್ಞಾನ ದಯಪಾಲಿಸು ಎಂದು ಪ್ರಾರ್ಥಿಸಿರಿ." (20:114)** ಜ್ಞಾನದ ಆರಂಭವು ಆದಮ್(ಅ)ರಿಂದಲೇ ಆಗಿದೆ. **"ಅಲ್ಲಾಹನು ಆದಮರಿಗೆ ಸಕಲ ವಸ್ತುಗಳ ನಾಮಗಳನ್ನು ಕಲಿಸಿದನು." (2:31)**

"ದಾಸರ ಮುಂದಿರುವುದನ್ನೂ ಅವರಿಂದ ಮರೆಯಾಗಿರುವುದನ್ನೂ ಆತನು ಬಲ್ಲನು. ಆತನು ತಿಳಿಯಗೊಡಿಸುವ ಹೊರತು ಆತನ ಜ್ಞಾನ ಭಂಡಾರದಿಂದ ಯಾವ ವಿಷಯವನ್ನೂ ಅವರು ತಿಳಿಯಲಾರರು" ಎಂಬ ಈ ವಚನದ ಭಾಗಕ್ಕೂ ಶಫಾಅತ್‌ನ ಕಲ್ಪನೆಗೂ ನೇರವಾದ ಸಂಬಂಧವಿದೆ. ಅಂದರೆ ಅಲ್ಲಾಹನಿಗೆ ಎಲ್ಲವೂ ತಿಳಿದಿದೆ. ಅವನದು ಪರಿಪೂರ್ಣ ಜ್ಞಾನ. ಆದರೆ ಮಾನವನದು ಪರಿಮಿತ ಜ್ಞಾನ. ಈ ಪರಿಮಿತ ಜ್ಞಾನ ಹೊಂದಿದ ಮಾನವನು ತನ್ನ ಜ್ಞಾನದ ಬಲದಿಂದ ಏನನ್ನೂ ಸಾಧಿಸಲಾರ. ಅದೇ ರೀತಿ ಅಲ್ಲಾಹನನ್ನು ಮೆಚ್ಚಿಸಲಾರ. ಅಲ್ಲಾಹನು ಅನುಮತಿ ನೀಡಿದರೆ ಮಾತ್ರ ಯಾರ ಬಗೆಗಾದರೂ ಅವನು ಶಿಫಾರಸು ಮಾಡಬಲ್ಲನು. ಅದು ಕೂಡಾ ಅಲ್ಲಾಹನು ಬಯಸಿದವರ ಪರವಾಗಿ ಮಾತ್ರ. ತಾನು ಬಯಸಿದವರ ಪರವಾಗಿ ಶಿಫಾರಸು ಮಾಡಲು ಮಾನವನಿಗೆ ಸಾಧ್ಯವಿಲ್ಲ. ಏಕೆಂದರೆ ಯಾರ ಪರವಾಗಿ ಶಿಫಾರಸು ಮಾಡಲು ಅವನು ಬಯಸುವನೋ ಅವರ ಬಗ್ಗೆ ಪರಿಪೂರ್ಣ ಜ್ಞಾನ ಅವನಿಗಿಲ್ಲ. ಅದು ಕೇವಲ ಅಲ್ಲಾಹನಿಗಿರುವುದು. ಒಬ್ಬನ ಬಗ್ಗೆ ಅವನಿಗೆ ಶಿಫಾರಸು ಮಾಡಲು ಅನುಮತಿ ನೀಡಬೇಕೋ ಬೇಡವೋ ಎಂದು ತೀರ್ಮಾನಿಸುವುದೂ ಅವನೇ. ಅವನ ತೀರ್ಮಾನದ ಆಧಾರದಲ್ಲೇ ಅವನು ಯಾರಿಗಾದರೂ ಅನುಮತಿ ನೀಡುವನು.

ಅನಂತರ "ಅವನ ಅಧಿಕಾರವು ಆಕಾಶಗಳನ್ನೂ, ಭೂಮಿಯನ್ನೂ ವ್ಯಾಪಿಸಿದೆ" ಎನ್ನಲಾಗಿದೆ. ವಚನದಲ್ಲಿ 'ಕುರ್ಸೀ' ಎಂಬ ಪದ ಪ್ರಯೋಗಿಸಲಾಗಿದೆ. ಸಾಮಾನ್ಯವಾಗಿ

ಈ ಪದವನ್ನು ಕುರ್ಚಿ, ಅಧಿಕಾರ ಪೀಠ, ಗದ್ದುಗೆ ಇತ್ಯಾದಿಗಳಿಗೆ ಹೇಳಲಾಗುತ್ತದೆ. ನಮ್ಮ ಭಾಷೆಯಲ್ಲೂ ಇದಕ್ಕೆ ಇದೇ ಅರ್ಥವಿದೆ. ಲೋಕದಲ್ಲಿ ಹೆಚ್ಚಿನೆಲ್ಲ ಜಗಳ-ಯುದ್ಧಗಳು ಇದೇ ಕುರ್ಚಿಗಾಗಿ ನಡೆದಿದೆ. ನಡೆಯುತ್ತಲೇ ಇದೆ. ಸಾಮ್ರಾಜ್ಯ ಎಂತಲೂ ಇದನ್ನು ಅರ್ಥೈಸಬಹುದು. ಅಂದರೆ ಆತನ ಸಾಮ್ರಾಜ್ಯವು ಭೂಮಿ-ಆಕಾಶಗಳನ್ನು ವ್ಯಾಪಿಸಿ ಕೊಂಡಿದೆ. ಅವನ ಅಧಿಕಾರವು ಯಾವುದೇ ಒಂದು ಸೀಮಿತ ಪ್ರದೇಶಕ್ಕೋ ವಲಯಕ್ಕೋ ಇರುವಂತಹದಲ್ಲ ಅಥವಾ ಯಾವುದಾದರೂ ವರ್ಗಕ್ಕೆ ಸೀಮಿತವಾಗಿಲ್ಲ. ಅದು ಸರ್ವ ವ್ಯಾಪಿಯಾಗಿದೆ. ಅವನ ಅಧಿಕಾರ ಕ್ಷೇತ್ರದಿಂದ ಯಾವುದೂ ಹೊರಗಿಲ್ಲ. ಪವಿತ್ರ ಕುರ್‌ಆನ್ ಇದನ್ನು ಈ ರೀತಿ ವಿವರಿಸುತ್ತದೆ.

**"ಅವನು, ಆಕಾಶಗಳಲ್ಲೂ ಭೂಮಿಯಲ್ಲೂ ಅವೆರಡರ ನಡುವೆಯೂ ಹಾಗೂ ಮಣ್ಣಿನಡಿಯಲ್ಲಿಯೂ ಇರುವ ಸಕಲ ವಸ್ತುಗಳ ಮಾಲಿಕನಾಗಿರುತ್ತಾನೆ." (20:6)**

ಅಲ್ಲಾಹನ ಸಾಮ್ರಾಜ್ಯವು ಈ ಲೋಕಕ್ಕೆ ಮಾತ್ರ ಸೀಮಿತವಲ್ಲ. ಪರಲೋಕದಲ್ಲೂ ಅಧಿಕಾರ ಅವನದೇ ಆಗಿರುವುದು. **"ವಾಸ್ತವದಲ್ಲಿ ಪರಲೋಕ ಮತ್ತು ಇಹಲೋಕ ಇವೆರಡಕ್ಕೂ ನಾವೇ ಒಡೆಯರು." (92:13)**

**"ಆಕಾಶಗಳಲ್ಲೂ ಭೂಮಿಯಲ್ಲೂ ಇರುವ ಎಲ್ಲರೂ ಅವನ ದಾಸರು. ಎಲ್ಲರೂ ಅವನ ಆಜ್ಞಾಧೀನರೇ ಆಗಿರುತ್ತಾರೆ." (30:26)**

ಅಂದರೆ ಅಲ್ಲಾಹನೇ ರಾಜಾಧಿರಾಜ. ಈ ಭೂಮಿಯಲ್ಲಿ ಮಾತ್ರವಲ್ಲ ಆಕಾಶಗಳಲ್ಲೂ. ಈ ಲೋಕದಲ್ಲಿ ಮಾತ್ರವಲ್ಲ, ಪರಲೋಕದಲ್ಲೂ. ಅವನೇ ಸಾರ್ವಭೌಮ ಚಕ್ರವರ್ತಿ. ಮಾನವನ ಸಹಿತ ಸೃಷ್ಟಿಗಳೆಲ್ಲರೂ ಅವನ ದಾಸರು ಮತ್ತು ಪ್ರಜೆಗಳು. **"ಆಜ್ಞಾಧಿಕಾರವು ಅಲ್ಲಾಹನಿಗೆ ಹೊರತು ಇನ್ನಾರಿಗೂ ಇಲ್ಲ." (12:40)**

ಈ ಅಧಿಕಾರ ಕುರ್ಚಿಯು ಅಲ್ಲಾಹನಿಗೆ ಸಿಕ್ಕಿರುವುದು ಯಾರದೇ ಔದಾರ್ಯದಿಂದಲ್ಲ. ಯಾರೋ ಮತ ಚಲಾಯಿಸಿ ಅವನು ಗೆಲ್ಲುವ ಮೂಲಕ ಲಭಿಸಿದುದೂ ಅಲ್ಲ. ಅವನ ಅಧಿಕಾರ ಪೀಠವನ್ನು ಮಾನವರ ಅಧಿಕಾರ ಪೀಠದಂತೆ ಕಲ್ಪಿಸುವುದೇ ಮೂರ್ಖತನವಾಗಿದೆ. ಅದರಲ್ಲಿ ಅವನು ತನ್ನ ಸ್ವಯಂ ಸಾಮರ್ಥ್ಯದಿಂದ ವಿರಾಜಮಾನನಾಗಿರುವನು. ಅಲ್ಲಾಹನು ಯಾವುದೇ ಭೌತಿಕ ಅಸ್ತಿತ್ವವಲ್ಲ. ಅವನು ಶರೀರ ಮತ್ತು ದಿಕ್ಕು ಎಲ್ಲದರಿಂದಲೂ ಅತೀತನು. ಅಲ್ಲಾಹನ ಅಸ್ತಿತ್ವದ ಸ್ವರೂಪ ಮತ್ತು ವಾಸ್ತವಿಕತೆಗಳು ಮಾನವ ಬುದ್ಧಿಗೆ ಎಟಕುವಂತಹದ್ದಲ್ಲ. ಇಂತಹ ವಚನಗಳನ್ನು ಕೆದಕುತ್ತಾ ಹೋದರೆ ಮಾನವನು ಏನನ್ನೂ ಗಳಿಸಲಾರನು. ಏಕೆಂದರೆ ಇದು 'ಮುತಶಾಬಿಹಾತ್'ಗಳಲ್ಲಿ ಸೇರಿದೆ. ಇದು ಮಾನವನ ಇಂದ್ರಿಯಗಳಿಗೆ ಅತೀತವಾದ, ನೋಡಲು, ಸ್ಪರ್ಶಿಸಲು ಮತ್ತು ಸವಿಯಲು ಸಾಧ್ಯವಿಲ್ಲ ದಂತಹ ವಿಷಯವಾಗಿದೆ. ಅಲ್ಲಾಹನ 'ಅರ್ಶ್' ಮತ್ತು 'ಕುರ್ಸೀ'ಗಳು ಆಕಾಶ-ಭೂಮಿಗಳಿ ಗಿಂತ ಎಷ್ಟೋ ದೊಡ್ಡದಾಗಿವೆಯೆಂದು ಹದೀಸ್‌ಗಳಿಂದ ತಿಳಿದು ಬರುತ್ತದೆ.

ಒಮ್ಮೆ ಅಬೂದರ್ರ್ ಗಿಫಾರಿ(ರ) ಪ್ರವಾದಿಯವರಲ್ಲಿ(ಸ), ಕುರ್ಸೀ ಎಂದರೇನು, ಅದು ಹೇಗಿರಬಹುದು ಎಂದು ಕೇಳಿದಾಗ ಅವರು ಹೇಳಿದರು- "ನನ್ನ ಪ್ರಾಣ ಯಾರ

ಕೈಯಲ್ಲಿದೆಯೋ ಆತನಾಣೆ! ಏಳು ಆಕಾಶಗಳು ಮತ್ತು ಭೂಮಿಯನ್ನು ಕುರ್ಸೀಗೆ ಹೋಲಿಸಿದರೆ, ಒಂದು ವಿಶಾಲವಾದ ದೊಡ್ಡ ಬಯಲಲ್ಲಿ ಒಂದು ಸಣ್ಣ ಉಂಗುರದ ವೃತ್ತ ಹಾಕಿದಂತೆ."

ಇಷ್ಟು ದೊಡ್ಡ ಸಾಮ್ರಾಜ್ಯವನ್ನು ನಡೆಸಲು ಅಲ್ಲಾಹನಿಗೆ ಅಪಾರ ಶಕ್ತಿ ಬೇಕು. ಅದರ ಮೇಲೆ ಸದಾ ನಿಗಾ ಇರಿಸಬೇಕು. ಅದರ ಒಂದೊಂದು ಕಣದ ಕುರಿತೂ ಪೂರ್ಣ ತಿಳುವಳಿಕೆ ಇರಬೇಕು. ಯಾರಿಗೂ ಅವನ ಸಾಮ್ರಾಜ್ಯದಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವಿಲ್ಲ. ಅಲ್ಲಾಹನು, ಯಕ್ಷರು ಮತ್ತು ಮಾನವರನ್ನು ಕರೆದು ಹೇಳುತ್ತಾನೆ- **"ನೀವು ಭೂಮಿ-ಆಕಾಶಗಳ ಸರಹದ್ದುಗಳಿಂದ ಹೊರಗೆ ಓಡಿ ಹೋಗಬಲ್ಲಿರಾದರೆ ಓಡಿ ನೋಡಿರಿ, ನೀವು ಓಡಲಾರಿರಿ, ಅದಕ್ಕೆ ಪ್ರಚಂಡ ಶಕ್ತಿ ಬೇಕು." (55:33)** ಅಂದರೆ ಅಲ್ಲಾಹನ ಹಿಡಿತದಿಂದ ಯಾರಿಗೂ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಹಾಗೆ ತಪ್ಪಿಸಿಕೊಳ್ಳುವುದು ಯಾರಿಂದಲಾದರೂ ಸಾಧ್ಯವೆಂದಾದರೆ ಆತ ಅಲ್ಲಾಹನ ವಿಚಾರಣೆಗೂ ಸಿಗಲಾರ. ಆದರೆ ಅದು ಸಾಧ್ಯವಿಲ್ಲವೆಂಬುದು ವ್ಯಕ್ತ. ಆದ್ದರಿಂದ ಅವನ ಹಿಡಿತದಿಂದ ತಪ್ಪಿಸಿಕೊಳ್ಳಲು ಯಾರದೇ ಆಶ್ರಯ ಹುಡುಕುವುದು, ಶಿಫಾರಸುದಾರರನ್ನು ಕಲ್ಪಿಸುವುದು ಆತನ ಸಾಮರ್ಥ್ಯವನ್ನು ಅಪಮಾನಿಸಿದಂತಾದೀತು. ಅಲ್ಲಾಹನು ಹೇಳುತ್ತಾನೆ- **"ನೀವೆಲ್ಲಿದ್ದರೂ ಅಲ್ಲಾಹನು ನಿಮ್ಮೆಲ್ಲರನ್ನೂ ಮರಳಿ ತರುವನು. ಅವನ ಅಧಿಕಾರ ವ್ಯಾಪ್ತಿಯಿಂದ ಯಾವುದೂ ಹೊರಗಿಲ್ಲ." (2:148)**

ಪ್ರವಾದಿ(ಸ) ಹೇಳಿದ ಒಂದು ಘಟನೆಯನ್ನು ವಿವರಿಸುವುದು ಇಲ್ಲಿ ಪ್ರಸ್ತುತವೆನಿಸುತ್ತದೆ. ಒಬ್ಬನು ತನ್ನ ಜೀವಮಾನವಿಡೀ ಕೆಡುಕಿನಲ್ಲಿ ಕಳೆದಿದ್ದು ಸಾಯುವ ಸಮಯ ಬಂದಾಗ ತನ್ನ ಮನೆ ಮಂದಿಯನ್ನು ಕರೆದು, ನಾನು ಸತ್ತರೆ ನನ್ನನ್ನು ಹೊತ್ತಿಸಿ ಬೂದಿ ಮಾಡಬೇಕು. ಅನಂತರ ಜೋರಾಗಿ ಗಾಳಿ ಬೀಸುವ ದಿನ ಸಮುದ್ರಕ್ಕೆಸೆಯಬೇಕೆಂದು ಉಪದೇಶಿಸಿದನು. ಅವರು ಹಾಗೆಯೇ ಮಾಡಿದರು. ಆದರೆ ಅಲ್ಲಾಹನು ಅವನ ಅಂಗಾಂಗಗಳನ್ನು ಪುನಃ ಜೋಡಿಸಿ ತನ್ನ ಮುಂದೆ ಹಾಜರುಪಡಿಸಿ, ನೀನೇಕೆ ಹಾಗೆ ಮಾಡಿದೆ ಎಂದು ಕೇಳಿದಾಗ, ಅವನು ಪ್ರಭೂ! ನಾನು ನಿನ್ನನ್ನು ಭೇಟಿಯಾಗುವ ಭಯದಿಂದಾಗಿ ನನ್ನ ಅಸ್ತಿತ್ವ ನಿನಗೆ ಸಿಗಬಾರದೆಂಬ ಉದ್ದೇಶದಿಂದ ಹಾಗೆ ಮಾಡಿದೆ ಎನ್ನುತ್ತಾನೆ. 'ನನ್ನ ಭಯದಿಂದ ಹಾಗೆ ಮಾಡಿದ್ದರೆ, ನಾನು ನಿನ್ನನ್ನು ಕ್ಷಮಿಸಿದ್ದೇನೆ ಎಂದು ಅಲ್ಲಾಹನು ಉತ್ತರಿಸುತ್ತಾನೆ (ಬುಖಾರಿ) ಇಲ್ಲಿ ಅಲ್ಲಾಹನ ಸಾಮರ್ಥ್ಯವು ಸ್ಪಷ್ಟವಾಗಿ ಗೋಚರಿಸುತ್ತದೆ. ಮಾನವನು ಎಲ್ಲಿದ್ದರೂ, ಯಾವ ಸ್ಥಿತಿಯಲ್ಲಿದ್ದರೂ ಅವನನ್ನು ಹಿಡಿದು ವಿಚಾರಣೆ ನಡೆಸುವ ಪೂರ್ಣ ಸಾಮರ್ಥ್ಯ ಅವನಿಗಿದೆ ಎಂದು ವ್ಯಕ್ತವಾಗುತ್ತದೆ.

"ಅವುಗಳ ಸಂರಕ್ಷಣೆಯು ಅವನಿಗೆ ದಣಿಸುವಂತಹ ಕಾರ್ಯವಲ್ಲ" ಎಂದು ಹೇಳಿ ಎರಡು ವಿಶೇಷ ಗುಣಗಳನ್ನು ಸೇರಿಸುತ್ತಾ ವಚನ(ಆಯತುಲ್ ಕುರ್ಸೀ)ವನ್ನು ಕೊನೆಗೊಳಿಸಲಾಗಿದೆ.

'ಅಲ್ ಹಫೀಝ್' ಎಂಬುದು ಅಲ್ಲಾಹನ ಗುಣನಾಮಗಳಲ್ಲೊಂದು. ಅದರ ಅರ್ಥ- 'ಸಂರಕ್ಷಿಸುವವನು, ಯಾವುದೇ ವಸ್ತುವನ್ನು ಕೆಡದಂತೆ, ಹಾಳಾಗದಂತೆ ನೋಡಿ ಕೊಳ್ಳುವವನು' ಎಂದಾಗುತ್ತದೆ. ಅಲ್ಲಾಹನು ಭೂಮಿ-ಆಕಾಶಗಳನ್ನು ಸೃಷ್ಟಿಸಿರುವುದು ಮಾತ್ರವಲ್ಲ, ಅದರ ಸಂರಕ್ಷಣೆಯ ಹೊಣೆಯನ್ನೂ ತಾನೇ ವಹಿಸಿಕೊಂಡಿದ್ದಾನೆ. ಅವುಗಳನ್ನು ಸೃಷ್ಟಿಸಿ ಅದರ ಸಂರಕ್ಷಣೆಯ ಭಾರವನ್ನು ಇತರ ಯಾರ ಮೇಲೂ ಹೊರಿಸಿಲ್ಲ. ಅಲ್ಲಾಹನು ಸರ್ವ ಸಮರ್ಥನು. ಭೂಮಿ-ಆಕಾಶಗಳನ್ನು ಸೃಷ್ಟಿಸುವುದು ಅವನಿಗೆ ಎಷ್ಟು ಸುಲಭವೋ ಅವುಗಳನ್ನು ಸಂರಕ್ಷಿಸುವುದೂ ಅವನಿಗೆ ಅಷ್ಟೇ ಸುಲಭ. ಆಕಾಶಗಳು ಏಳು ಇವೆ. ಅವು ಎಷ್ಟು ಬೃಹತ್ತಾಗಿವೆ, ನಮ್ಮ ಕಣ್ಣಿಗೆ ಕಾಣುವಂತಹ ಆಕಾಶದಲ್ಲಿ ಅಲ್ಲಾಹನು ಎಂತಹ ಅದ್ಭುತ ವಸ್ತುಗಳನ್ನು ಸೃಷ್ಟಿಸಿದ್ದಾನೆಂಬುದನ್ನು ಅವನು ಹೀಗೆ ಹೇಳುತ್ತಾನೆ- **"ನಾವು ನಿಮ್ಮ ಸಮೀಪದ ಆಕಾಶವನ್ನು ಉಜ್ವಲ ದೀಪಗಳಿಂದ ಅಲಂಕರಿಸಿದ್ದೇವೆ." (67:5)** ಈ ಆಕಾಶದಲ್ಲಿ ಸೂರ್ಯ-ಚಂದ್ರರಿದ್ದಾರೆ. ಬೃಹತ್ ನಕ್ಷತ್ರಗಳಿವೆ. ಒಂದೊಂದು ನಕ್ಷತ್ರವೂ ನಮ್ಮ ಸೂರ್ಯನಿಗಿಂತ ಸಾವಿರಾರು, ಲಕ್ಷಾವಧಿ ಪಟ್ಟು ದೊಡ್ಡದಾಗಿವೆ. ಅವೆಲ್ಲ ಅತ್ಯಂತ ಶಿಸ್ತಿನಿಂದ ತಂತಮ್ಮ ಕಾರ್ಯಕ್ಷೇತ್ರದಲ್ಲಿ ಚಲಿಸುತ್ತಿವೆ. ಇಷ್ಟು ದೊಡ್ಡ ಆಕಾಶವನ್ನು ಅವನು 'ಕುನ್' (ಆಗು) ಎಂಬ ಶಬ್ದದೊಂದಿಗೆ ಅಸ್ತಿತ್ವಕ್ಕೆ ತಂದಿದ್ದಾನೆ. ಅಲ್ಲಾಹನು ಪ್ರಶ್ನಿಸುತ್ತಾನೆ-**"ನಿಮ್ಮನ್ನು ಸೃಷ್ಟಿಸುವ ಕಾರ್ಯ ಹೆಚ್ಚು ಪ್ರಯಾಸಕರವೋ ಅಥವಾ ಆಕಾಶವನ್ನೋ?"**

**(79:27)**

ಸೃಷ್ಟಿ ಕಾರ್ಯವು ಅಲ್ಲಾಹನಿಗೆ ಸುಲಭವಾಗಿರುವಾಗ ಅದರ ಸಂರಕ್ಷಣೆಯೂ ಅಷ್ಟೇ ಸುಲಭವಾಗಿರಲೇಬೇಕೆಂದು ನಮ್ಮ ಬುದ್ಧಿಯೂ ಅಂಗೀಕರಿಸುತ್ತದೆ. ಭೂಮಿ-ಆಕಾಶ ಗಳನ್ನೂ ಅವುಗಳ ಮಧ್ಯೆ ಇರುವುದೆಲ್ಲವನ್ನೂ ಸಂರಕ್ಷಿಸುವುದು ಅವನನ್ನು ದಣಿಸುವಂತಹ ಕಾರ್ಯವಲ್ಲ. ಅದು ಅವನಿಗೆ ಭಾರವೂ ಅಲ್ಲ. ಏಕೆಂದರೆ ಅವನದು ಸದಾ ಜೀವಂತ ವಿರುವ ಅಸ್ತಿತ್ವವಾಗಿದೆ. ಅವನಿಗೆ ತೂಕಡಿಕೆಯೂ ಇಲ್ಲ. ನಿದ್ರೆಯೂ ಅವನನ್ನು ಬಾಧಿಸು ವುದಿಲ್ಲ. ಅವನು ಎಲ್ಲ ಕಾರ್ಯಗಳ ಮೇಲ್ನೋಟವನ್ನು ತಾನೇ ವಹಿಸಿಕೊಂಡಿದ್ದಾನೆ. ಎಲ್ಲವನ್ನೂ ಸದಾ ವೀಕ್ಷಿಸುತ್ತಿರುತ್ತಾನೆ. ಎಲ್ಲ ವಿಷಯಗಳನ್ನೂ ಬಲ್ಲವನಾಗಿದ್ದಾನೆ. ಅವನು ಹೇಳುತ್ತಾನೆ-

**"ಸಪ್ತಗಗನಗಳನ್ನು ಮತ್ತು ಅವುಗಳಂತೆಯೇ ಭೂಮಿಯ ವಿಧದಿಂದಲೂ ಸೃಷ್ಟಿಸಿ ದವನು ಅಲ್ಲಾಹನೇ ಆಗಿದ್ದಾನೆ. ಅವುಗಳ ನಡುವೆ ಆದೇಶಗಳು ಇಳಿಯುತ್ತಲೇ ಇರುತ್ತವೆ. ಅಲ್ಲಾಹನು ಎಲ್ಲದಕ್ಕೂ ಸಾಮರ್ಥ್ಯವುಳ್ಳವನು ಮತ್ತು ಅಲ್ಲಾಹನ ಜ್ಞಾನವು ಎಲ್ಲ ವಿಷಯ ಗಳಿಗೂ ವ್ಯಾಪಿಸಿಕೊಂಡಿದೆ ಎಂಬುದನ್ನು ನೀವು ತಿಳಿದುಕೊಳ್ಳುವಂತಾಗಲು (ನಿಮಗಿದನ್ನು ತಿಳಿಸಲಾಗುತ್ತಿದೆ)." (65:12)**

ಕೊನೆಯಲ್ಲಿ, "ಅವನು ಏಕೈಕ ಮಹೋನ್ನತನೂ ಸರ್ವಶ್ರೇಷ್ಠನೂ ಆಗಿದ್ದಾನೆ" ಎಂದು ಹೇಳುವ ಮೂಲಕ ಆಯತುಲ್ ಕುರ್ಸೀಯಲ್ಲಿ ವಿವರಿಸಿರುವಂತಹ ಅಲ್ಲಾಹನ

ವ್ಯಕ್ತಿತ್ವ ಮತ್ತು ಅವನ ಪರಿಪೂರ್ಣ ಗುಣವಿಶೇಷಗಳು ಮಗದೊಮ್ಮೆ ಮಾನವನ ಮನಸ್ಸಿನಲ್ಲಿ ಮೂಡುವಂತೆ ಮಾಡಿದ್ದಾನೆ. ಅವೆಲ್ಲವನ್ನೂ ಗ್ರಹಿಸಿಕೊಂಡಾಗ ಎಲ್ಲ ಪ್ರತಿಷ್ಠೆ, ಮಹಾನತೆ ಹಾಗೂ ಔನ್ನತ್ಯಗಳ ಒಡೆಯ ಕೇವಲ ಆತನೊಬ್ಬನೆ ಎಂದು ಹೇಳಲು ಮಾನವ ನಿರ್ಬಂಧಿತನಾಗುತ್ತಾನೆ. ತನ್ನ ದುರ್ಬಲಾವಸ್ಥೆಯ ಕಡೆಗೆ ಅವನ ಗಮನ ಹರಿಯುತ್ತದೆ. ಅವನನ್ನು ಮಾತ್ರ ಆಶ್ರಯಿಸಿಕೊಂಡು ಬದುಕಬೇಕು, ಬೇರೆ ಯಾರ ಆಶ್ರಯವನ್ನೂ ಹಿಡಿಯಬಾರದು, ಅದಕ್ಕಾಗಿ ಆಗ್ರಹಿಸಲೂಬಾರದು, ಅವನ ಮುಂದೆ ತನ್ನ ದಾಸ್ಯತನ ಪ್ರದರ್ಶಿಸಬೇಕೆಂಬ ಆಗ್ರಹವು ಅವನಲ್ಲಿ ಜೀವಂತಗೊಳ್ಳುತ್ತದೆ. ಆಗ ಅವನು ಅಲ್ಲಾಹನಿಗೆ ಕೃತಜ್ಞನಾಗಿರುವನು ಅಲ್ಲಾಹನ ಮಾರ್ಗದಲ್ಲಿ ಸ್ಥಿರವಾಗಿ ಮುಂದುವರಿಯವನು. ಅವನಿಗಾಗಿ ಮಾತ್ರ ಅವನ ಬದುಕನ್ನು ಮೀಸಲಿಡುವನು. ಇದು ಅಪ್ಪಟ ತೌಹೀದ್‌ನ ಪಾಠವಾಗಿದೆ.

**"ಹೇಳಿರಿ- ನನ್ನ ನಮಾಝ್, ನನ್ನ ಸರ್ವ ಉಪಾಸನಾವಿಧಿಗಳು, ನನ್ನ ಜೀವನ ಮತ್ತು ನನ್ನ ಮರಣ ಎಲ್ಲವೂ ಯಾವ ಸಹಭಾಗಿಯೂ ಇಲ್ಲದ ಸರ್ವಲೋಕಪಾಲಕನಿಗಾಗಿದೆ- ಇದನ್ನೇ ನನಗೆ ಆದೇಶಿಸಲಾಗಿದೆ. ನಾನು ಆಜ್ಞಾನುಸರಣೆಯೊಂದಿಗೆ ಶಿರಬಾಗುವವರಲ್ಲಿ ಸರ್ವಪ್ರಥಮನಾಗಿರುತ್ತೇನೆ."** **(6:162-163)**

## ಉಪ ಸಂಹಾರ

ಆಯತುಲ್ ಕುರ್ಸೀ ಪವಿತ್ರ ಕುರ್‌ಆನಿನ ಅತ್ಯಂತ ಶ್ರೇಷ್ಠ ವಚನವಾಗಿದೆ. ಇದರಲ್ಲಿ ಅಲ್ಲಾಹನನ್ನು ಸ್ಪಷ್ಟ ರೂಪದಲ್ಲಿ ಪರಿಚಯಿಸಲಾಗಿದೆ. ಅಲ್ಲಾಹನು ಏಕೈಕನು, ಚಿರಂತನನು, ಸ್ವಯಂಸ್ಥಿರನು. ಪ್ರಪಂಚದ ಆದಿಪತ್ಯವು ಅವನ ಕೈಯಲ್ಲೇ ಇದೆ. ಭೂಮಿ-ಆಕಾಶಗಳೂ ಅವು ಒಳಗೊಂಡಿರುವ ಸಕಲವೂ ಸೇರಿದಂತೆ ಎಲ್ಲದರ ಒಡೆಯ ಅವನೇ ಆಗಿರುತ್ತಾನೆ. ಅವನೇ ಅವುಗಳನ್ನು ನಿಯಂತ್ರಿಸುತ್ತಾನೆ. ತನ್ನ ಸೃಷ್ಟಿಯ ಮೇಲೆ ಸದಾ ದೃಷ್ಟಿಯಿರಿಸುತ್ತಿದ್ದಾನೆ. ಅವನಿಗೆ ತೂಕಡಿಕೆಯೂ ನಿದ್ರೆಯೂ ಬಾಧಿಸುವುದಿಲ್ಲ.

ಆಯತುಲ್ ಕುರ್ಸೀಯ ಕೇಂದ್ರೀಯ ವಿಷಯ ಶಫಾಅತ್ ಆಗಿದೆ. ಅಲ್ಲಾಹನ ಮುಂದೆ ಬಾಯ್ತೆರೆಯುವ ಧೈರ್ಯ ಯಾರಿಗೂ ಇಲ್ಲ. ವಿಶ್ವಾಸಿಗಳಾಗಿದ್ದೂ ಪಾಪಿಗಳಾಗಿ ಬದುಕಿ ತಮ್ಮನ್ನು ನರಕಕ್ಕೆ ಅರ್ಹಗೊಳಿಸಿದ ಅಥವಾ ನರಕಕ್ಕೆ ದೂಡಲ್ಪಟ್ಟ ಕೆಲವು ಮಂದಿಗಾಗಿ, ಅವರನ್ನು ನರಕಕ್ಕೆ ಕಳಿಸದಂತೆ ಅಥವಾ ನರಕಕ್ಕೆ ಹಾಕಿದ್ದರೂ ಅಲ್ಲಿಂದ ಪಾರುಗೊಳಿಸುವಂತೆ, ಪ್ರಾರ್ಥಿಸಲಿಕ್ಕಾಗಿ ಅಥವಾ ಶಿಫಾರಸು ಮಾಡಲಿಕ್ಕಾಗಿ ಅಲ್ಲಾಹನು ಕೆಲವು ಸಜ್ಜನ ದಾಸರಿಗೆ (ಪ್ರವಾದಿಗಳು, ಹುತಾತ್ಮರು, ಔಲಿಯಾಗಳು) ಅನುಮತಿ ನೀಡಿ ಅವರನ್ನು ಗೌರವಿಸಿದ್ದಾನೆ. ವಸ್ತುತಃ ಅದರ ಅಗತ್ಯಅವನಿಗಿಲ್ಲ. ಏಕೆಂದರೆ ಮನುಷ್ಯರ ಎಲ್ಲ ಪ್ರತ್ಯಕ್ಷ-ಪರೋಕ್ಷ ಹಾಗೂ ಅಂತರಂಗ-ಬಹಿರಂಗಗಳನ್ನು ಅವನು ಬಲ್ಲವನಾಗಿದ್ದಾನೆ. ಅವನ ಜ್ಞಾನವು ಪರಿಪೂರ್ಣವಾಗಿದ್ದು, ಅದಕ್ಕೆ ಸಾಟಿಯಾದ ಜ್ಞಾನ ಯಾರಿಗೂ ಇಲ್ಲ. ಎಲ್ಲರೂ ಅವನ ಅವಲಂಬಿತರು, ಅವನು ಯಾರ ಅವಲಂಬಿತನೂ ಅಲ್ಲ. ಅವನ

ಜ್ಞಾನವನ್ನು ಕರಗತ ಮಾಡಲು ಯಾರಿಂದಲೂ ಸಾಧ್ಯವಿಲ್ಲ. ಆದರೆ ಅವನು ಬಯಸಿದವರಿಗೆ ಜ್ಞಾನದ ಒಂದಂಶವನ್ನು ನೀಡುತ್ತಾನೆ.

ಅವನ ಕುರ್ಚಿ ಅಥವಾ ಅಧಿಕಾರ ಪೀಠವು ಭೂಮಿ-ಆಕಾಶಗಳನ್ನು ವ್ಯಾಪಿಸಿದೆ. ಎಲ್ಲದರ ಮೇಲೆ ಅವನದೇ ಅಧಿಕಾರ ನಡೆಯುತ್ತದೆ. ಅಲ್ಲಿಂದಲೇ ಎಲ್ಲಾ ಆದೇಶಗಳೂ ಜಾರಿಗೊಳ್ಳುತ್ತವೆ. ಅವನಿಗೆ ಯಾವ ರೀತಿ ಸೃಷ್ಟಿ ಕಾರ್ಯವು ಕಷ್ಟಕರವಲ್ಲವೋ ಅದೇ ರೀತಿ ಭೂಮಿ-ಆಕಾಶಗಳನ್ನೊಳಗೊಂಡ ಸಕಲ ಸೃಷ್ಟಿಯ ಸಂರಕ್ಷಣೆಯೂ ಅವನನ್ನು ದಣಿಸುವುದಿಲ್ಲ. ಅವನು ಮಹೋನ್ನತನೂ ಸರ್ವಶ್ರೇಷ್ಠನೂ ಆಗಿರುತ್ತಾನೆ. ಅವನನ್ನು ಮೀರಿಸುವವರು, ಅವನಿಗೆ ಸಮಾನರಾದವರು ಯಾರೂ ಇಲ್ಲ. ಇದು ಆಯತುಲ್ ಕುರ್ಸೀಯ ಸಾರವಾಗಿದೆ. ಇದನ್ನು ಚೆನ್ನಾಗಿ ಅಭ್ಯಸಿಸಿ ಮನನ ಮಾಡಿಕೊಂಡರೆ, ಮನುಷ್ಯನು ಕುಫ್ರ್, ಶಿರ್ಕ್‌ನ ಅಪಾಯದಿಂದ ಪಾರಾಗಬಲ್ಲನು. (ಅಲ್ಲಾಹನು ಅನುಗ್ರಹಿಸಲಿ) ಅಲ್ಲಾಹನ ಜ್ಞಾನ, ಅವನ ಶಕ್ತಿ ಸಾಮರ್ಥ್ಯಗಳು, ಅವನ ಪರಿಪೂರ್ಣತೆ, ವೈಶಾಲ್ಯತೆಗಳನ್ನು ನಮ್ಮ ಸೀಮಿತ ಅಳತೆ ಗೋಲಿನಿಂದ ಅಳೆಯಬಾರದು. ಇಲ್ಲಿಂದಲೇ ಅವನ ಕುರಿತು ಪಥಭ್ರಷ್ಟ ಚಿಂತನೆಗಳು ಮೂಡುವ ಮೂಲಕ ಶಿರ್ಕ್‌ನ ದ್ವಾರಗಳು ತೆರೆದುಕೊಳ್ಳುತ್ತವೆ. ತನ್ನ ಗುಣವೈಶಿಷ್ಟ್ಯಗಳ ಕುರಿತು ಅವನು ಹೇಗೆ ವಿವರಿಸಿದ್ದಾನೋ ಹಾಗೆಯೇ ಅವನನ್ನು ನಂಬಬೇಕು. ಊಹೆ, ಗುಮಾನಿ ಮತ್ತು ಉಪಮೆಗಳ ಕಲ್ಪನಾ ಲೋಕದಿಂದ ಹೊರ ಬರಬೇಕು. ಆಗ ಮಾತ್ರ ಮಾನವ ಸನ್ಮಾರ್ಗದಲ್ಲಿ ಸಾಗಬಲ್ಲ.

ಸೃಷ್ಟಿಗಳ ಪೈಕಿ ಮಾನವನು ಅತ್ಯಂತ ಶ್ರೇಷ್ಠ ಜೀವಿಯಾಗಿದ್ದಾನೆ. ಇತರ ಯಾವ ಜೀವಿಗಳಿಗೂ ನೀಡಿಲ್ಲದಂತಹ ಬುದ್ಧಿ, ವಿವೇಕ ಮತ್ತು ಜ್ಞಾನವನ್ನು ಅಲ್ಲಾಹನು ಮಾನವನಿಗೆ ನೀಡಿದ್ದಾನೆ. ಅಷ್ಟೇ ಅಲ್ಲ ಲೋಕದ ಸಕಲ ವಸ್ತುಗಳನ್ನೂ ಅವನ ನಿಯಂತ್ರಣಕ್ಕೆ ಕೊಟ್ಟು, ಅವನಿಗೆ ಅಧೀನಗೊಳಿಸಿದ್ದಾನೆ. ದೇವಚರರಿಂದ 'ಸುಜೂದ್' ಮಾಡಿಸುವ ಮೂಲಕ ಮಾನವನ ಸ್ಥಾನಮಾನವನ್ನು ಅವರಿಗಿಂತಲೂ ಶ್ರೇಷ್ಠಗೊಳಿಸಿದ್ದಾನೆ. ಭೂಮಿಯಲ್ಲಿರುವ ಸಕಲ ವಸ್ತುಗಳನ್ನು ಮಾನವನಿಗಾಗಿಯೇ ಸೃಷ್ಟಿಸಲಾಗಿದೆ.

"ಭೂಮಿಯಲ್ಲಿರುವುದನ್ನೆಲ್ಲ ನಿಮಗಾಗಿಯೇ ಸೃಷ್ಟಿಸಿದವನು ಆತನೇ." (2:29)

ಮಾನವನಿಗೆ ನೀಡಲಾದ ಶ್ರೇಷ್ಠತೆಯಿಂದ ಶೈತಾನನು ಅಸೂಯೆಗೊಳಗಾದನು. "ನೀನೇ ನೋಡು; ಇವನು ನನಗಿಂತ ಅಧಿಕ ಶ್ರೇಷ್ಠತೆ ನೀಡಲ್ಪಡಲು ಅರ್ಹನಿದ್ದನೇ?" (17:62)

"ನಾವು ಆದಮರ ಸಂತತಿಗೆ ಶ್ರೇಷ್ಠತೆಯನ್ನು ಪ್ರದಾನ ಮಾಡಿದೆವು." (17:70)

ಅದೇ ರೀತಿ ಮನುಷ್ಯರನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಲಾಗಿದೆ. ಆದರೆ ಅವನು ತನ್ನ ದುಷ್ಟತನದಿಂದಾಗಿ ನೀಚರಲ್ಲಿ ನೀಚನಾದನೆಂದು ಕುರ್‌ಆನ್ ಹೇಳುತ್ತದೆ. "ನಾವು ಮಾನವನನ್ನು ಅತ್ಯುತ್ತಮ ಪ್ರಕೃತಿಯಲ್ಲಿ ಸೃಷ್ಟಿಸಿರುತ್ತೇವೆ. ತರುವಾಯ ನಾವು ಅವನನ್ನು ಪಲ್ಲಟಗೊಳಿಸಿ, ನೀಚರಲ್ಲಿ ಅತ್ಯಂತ ನೀಚನಾಗಿ ಮಾಡಿದೆವು." (95:4-5)

ಮಾನವನ ಉನ್ನತಿ ಮತ್ತು ಅವನತಿ ಹಾಗೂ ಅವನ ಶ್ರೇಷ್ಠತೆ ಮತ್ತು ನೀಚತೆಯು ಅವನ ಕರ್ಮಗಳನ್ನು ಅವಲಂಬಿಸಿದೆ. ಅವನು ಸತ್ಕರ್ಮ ಮಾಡಿ ಸ್ವತಃ ಉತ್ತಮನಾಗಿ, ಜನಾದರಣೀಯನಾಗಿ ಅಲ್ಲಾಹನ ಪ್ರೀತಿಗೆ ಪಾತ್ರನಾದರೆ ಅವನು ಶ್ರೇಷ್ಠನೆನಿಸುತ್ತಾನೆ. ದುಷ್ಕರ್ಮಕ್ಕೆ ಬಲಿಯಾಗಿ ಜನರ ಬಳಿ ನಿಂದ್ಯನಾಗಿ ಅಲ್ಲಾಹನ ಕ್ರೋಧಕ್ಕೆ ಪಾತ್ರನಾದರೆ ಅವನು ಅಧಮನೆನಿಸುತ್ತಾನೆ.

ಮಾನವನು ಈ ಪ್ರಪಂಚದಲ್ಲಿ ಗಾತ್ರದ ದೃಷ್ಟಿಯಿಂದ ಅತ್ಯಂತ ನಿಕೃಷ್ಟ ಹಾಗೂ ಪುಟ್ಟ ಜೀವಿಯಾಗಿ ಕಂಡರೂ ಅವನಿಗೆ ಅಪಾರ ಶಕ್ತಿಯನ್ನು ನೀಡಲಾಗಿದೆ. ಅದರಿಂದಾಗಿಯೇ ಅವನು ದೈತ್ಯ ಗಾತ್ರದ ಆನೆ, ಹುಲಿ, ಸಿಂಹದಂತಹ ಶಕ್ತಿಶಾಲಿ ಜೀವಿಗಳನ್ನು ತನ್ನ ನಿಯಂತ್ರಣದಲ್ಲಿರಿಸುತ್ತಾನೆ. ಏಕೆಂದರೆ ಇತರ ಜೀವಿಗಳಿಗೆ ನೀಡಿಲ್ಲದಂತಹ ಬುದ್ಧಿ ಶಕ್ತಿ, ವಿವೇಕ ಮತ್ತು ಜಾಣ್ಮೆಯನ್ನು ಅವನು ಹೊಂದಿದ್ದಾನೆ. ಈ ಶಕ್ತಿಯೇ ಅವನನ್ನು ಅಹಂಕಾರಿ, ಗರ್ವಿ ಮತ್ತು ಉದ್ಧಟತನನ್ನಾಗಿ ಮಾಡಿ ಬಿಡುತ್ತದೆ. ಆಗ ಅವನು "ನಮಗಿಂತ ಶಕ್ತಿಶಾಲಿಗಳು ಯಾರಿದ್ದಾರೆ" ಮತ್ತು "ನಾನು ನಿಮ್ಮ ದೊಡ್ಡ ಪ್ರಭುವಲ್ಲವೆ?" ಎಂಬಂತಹ ಘೋಷಣೆಗಳನ್ನು ಕೂಗುತ್ತಾನೆ. ತನಗಿಂತ ಮೇಲೆ, ತನ್ನನ್ನು ಪ್ರಶ್ನಿಸುವ ಯಾವ ಶಕ್ತಿಯೂ ಇಲ್ಲವೆಂದು ಭಾವಿಸಿದಾಗ ಅಕ್ರಮ, ಅತ್ಯಾಚಾರ, ದಬ್ಬಾಳಿಕೆ, ಕ್ರೌರ್ಯ ಹಾಗೂ ಕ್ಷೋಭೆ ಹರಡುವವನಾಗಿ ಮಾರ್ಪಡುತ್ತಾನೆ.

ಪವಿತ್ರ ಕುರ್‌ಆನಿನಲ್ಲಿ ಇಂತಹ ಅನೇಕ ವ್ಯಕ್ತಿಗಳ ಮತ್ತು ಜನಾಂಗಗಳ ಚರಿತ್ರೆಯನ್ನು ಕೆಲವೊಮ್ಮೆ ಸಂಕ್ಷಿಪ್ತವಾಗಿಯೂ ಇನ್ನು ಕೆಲವೊಮ್ಮೆ ವಿವರವಾಗಿ ಬಿಚ್ಚಿಡಲಾಗಿದೆ. ನಮ್ರೂದ್, ಫಿರ್‌ಔನ್, ಹಾಮಾನ್ ಮುಂತಾದವರನ್ನು ವೈಯಕ್ತಿಕವಾಗಿಯೂ ಆದ್, ಸಮೂದ್, ನೂಹ್, ಸಾಲಿಹ್, ಲೂತರ ಜನಾಂಗಗಳನ್ನು ಸಾಮೂಹಿಕವಾಗಿಯೂ ಎತ್ತಿ ತೋರಿಸಿ ವಿಮರ್ಶಿಸಲಾಗಿದೆ. ಅವರಿಗೆ ಅಧಿಕಾರ ದೊರೆತಾಗ ಭೂಮಿಯನ್ನು ತೀವ್ರವಾಗಿ ಕೆಡಿಸಿ ಬಿಟ್ಟರು. ಅವರೆಲ್ಲ ಏನೇನು ಮಾಡುತ್ತಿದ್ದರೆಂಬುದನ್ನು ಈ ಕೆಳಗಿನ ವಚನಗಳಲ್ಲಿ ಸಂಕ್ಷಿಪ್ತವಾಗಿ ಹೇಳಲಾಗಿದೆ.

''ನಿಮ್ಮ ಪ್ರಭು ಉನ್ನತ ಸ್ತಂಭಗಳ ಆದ್‌ಇರಮ್‌ನವರೊಂದಿಗೆ ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ? ಅವರಂತಹ ಯಾವ ಜನಾಂಗವೂ ಜಗತ್ತಿನ ನಾಡುಗಳಲ್ಲಿ ಸೃಷ್ಟಿಸಲ್ಪಟ್ಟಿರಲಿಲ್ಲ. ಕಣಿವೆಗಳಲ್ಲಿ ಬಂಡೆಗಳನ್ನು ಕೊರೆದಿದ್ದ ಸಮೂದರೊಂದಿಗೆ ಮತ್ತು ಮೊಳೆಗಳವನಾದ ಫಿರ್‌ಔನನೊಂದಿಗೆ- (ಅವನು ಹೇಗೆ ವರ್ತಿಸಿದನೆಂಬುದನ್ನು ನೀವು ನೋಡಲಿಲ್ಲವೇ?). ಇವರು ಜಗತ್ತಿನ ನಾಡುಗಳಲ್ಲಿ ವಿದ್ರೋಹವೆಸಗಿದವರಾಗಿದ್ದರು ಮತ್ತು ಅಲ್ಲಿ ಬಹಳಷ್ಟು ಕ್ಷೋಭೆ ಹರಡಿದ್ದರು. ಕೊನೆಗೆ ನಿಮ್ಮ ಪ್ರಭು ಅವರ ಮೇಲೆ ಯಾತನೆಯ ಕೊರಡೆಯನ್ನು ಬಾರಿಸಿಬಿಟ್ಟನು.'' **(89:6-13)**

''ಅಂತಹವನಿಗೆ ಅಧಿಕಾರ ಪ್ರಾಪ್ತವಾದಾಗ ಭೂಮಿಯ ಮೇಲೆ ಅವನ ಚಟುವಟಿಕೆಗಳೆಲ್ಲ ಕ್ಷೋಭೆಯನ್ನುಂಟು ಮಾಡಲಿಕ್ಕೂ ಹೊಲ-ಬೆಳೆಗಳನ್ನು ಹಾಳುಮಾಡಲಿಕ್ಕೂ ಮಾನವ

ವಂಶವನ್ನು ನಾಶಮಾಡಲಿಕ್ಕೂ ಆಗಿರುತ್ತವೆ. ವಾಸ್ತವದಲ್ಲಿ (ಅವನು ಸಾಕ್ಷ್ಯವಿರಿಸುತ್ತಿರುವ) ಅಲ್ಲಾಹನು ಕ್ಷೋಭೆಯನ್ನು ಎಷ್ಟು ಮಾತ್ರಕ್ಕೂ ಮೆಚ್ಚುವುದಿಲ್ಲ." (2:205)

ಸಬಾ ರಾಣಿಯ ಹೇಳಿಕೆಯನ್ನು ಕುರ್‌ಆನ್ ಹೀಗೆ ಉಲ್ಲೇಖಿಸಿದೆ.

"ಅರಸರು ಒಂದು ನಾಡಿನೊಳಗೆ ನುಗ್ಗಿ ಬಂದಾಗ ಅದನ್ನು ಹಾಳುಗೆಡಹುತ್ತಾರೆ ಮತ್ತು ಅದರಲ್ಲಿರುವ ಮರ್ಯಾದಸ್ಥರನ್ನು ಅವಮಾನಗೊಳಿಸುತ್ತಾರೆ." (27:34)

ಫಿರ್‌ಔನನ ಜನಾಂಗದವರ ಅಂತಿಮ ಗತಿಯನ್ನು ಹೀಗೆ ವರ್ಣಿಸಲಾಯಿತು.

"ತಮ್ಮ ಅಪರಾಧಗಳ ಕಾರಣದಿಂದಾಗಿಯೇ ಅವರು ಮುಳುಗಿಸಲ್ಪಟ್ಟರು ಮತ್ತು ಅಗ್ನಿಗೆ ತಳ್ಳಲ್ಪಟ್ಟರು. ಅನಂತರ ಅವರಿಗೆ, ತಮ್ಮನ್ನು ಅಲ್ಲಾಹನಿಂದ ರಕ್ಷಿಸಬಲ್ಲ ಸಹಾಯಕನಾರೂ ಸಿಗಲಿಲ್ಲ." (71:25)

ಒಟ್ಟಿನಲ್ಲಿ, ಅಧಿಕಾರಸ್ಥರು ಮದವೇರಿ ಉದ್ಧಟತನಕ್ಕಿಳಿದಾಗ, ಅವರಿಗೆ ಕಾಲಾವಕಾಶ ನೀಡಿಯೂ ಅವರು ತಮ್ಮನ್ನು ಸುಧಾರಿಸದೆ, ತಮ್ಮ ಕೃತ್ಯದಲ್ಲೇ ಮುಂದುವರಿದು ಮಿತಿಮೀರಿದಾಗ ಅಲ್ಲಾಹನು ಅವರನ್ನು ಕಠಿಣವಾಗಿ ಶಿಕ್ಷಿಸಿದನು. ಅವರನ್ನು ರಕ್ಷಿಸು ವಂತಹವರು ಯಾರೂ ಇರುವುದಿಲ್ಲ. ಯಾವ ಶಿಫಾರಸೂ ಅಲ್ಲಾಹನ ಶಿಕ್ಷೆಯಿಂದ ಅವರನ್ನು ರಕ್ಷಿಸುವುದಿಲ್ಲ. ಕೆಡುಕಿಗೆ ಅಂಟಿಕೊಂಡಿದ್ದು, ಶಫಾಅತ್‌ನ ನಿರೀಕ್ಷೆ ಮತ್ತು ಭರವಸೆಯಲ್ಲಿ ಕುಳಿತುಕೊಂಡವರು ಕೊನೆಗೆ ನಿರಾಶರಾಗಬೇಕಾದೀತು. ಆದ್ದರಿಂದ ತಮ್ಮನ್ನು ತಾವೇ ಸುಧಾರಿಸಿಕೊಂಡು ಅಲ್ಲಾಹನ ಆಶ್ರಯವನ್ನು ಬಿಗಿಯಾಗಿ ಹಿಡಿಯುವುದೊಂದೇ ಮಾನವನ ಮುಕ್ತಿಗಿರುವ ಏಕೈಕ ದಾರಿ.

ಈ ಮಂದಿ ತಮ್ಮ ಉದ್ಧಟತನ, ವಿದ್ರೋಹ ನೀತಿ ಹಾಗೂ ಅಧಿಕಾರ ದುರುಪಯೋಗ ದಿಂದಾಗಿ ದೇವನ ಕೋಪಕ್ಕೆ ಗುರಿಯಾಗಿ ಶಾಶ್ವತ ಶಿಕ್ಷೆಗೆ ಅರ್ಹರಾದರೆ, ಅದೇ ಅಧಿಕಾರವನ್ನು ಸದುಪಯೋಗಪಡಿಸಿ, ಭೂಮಿಯ ಮೇಲೆ ಶಾಂತಿ, ಸುಭಿಕ್ಷೆಯನ್ನು ನೆಲೆ ನಿಲ್ಲಿಸಿದ ಕಾರಣ ಅಲ್ಲಾಹನ ಪ್ರೀತಿಗೆ ಪಾತ್ರರಾಗಿ ಆತನ ಬಳಿ ಉನ್ನತವಾದ ಸ್ಥಾನಮಾನ ಗಳಿಸಿದವರೂ ಶಾಶ್ವತ ಸ್ವರ್ಗಕ್ಕೆ ಅರ್ಹರಾಗಿದ್ದಾರೆ. ಪ್ರವಾದಿಗಳೂ ದುಲ್‌ಕರ್ನೈನ್‌ನಂತಹ ನ್ಯಾಯನಿಷ್ಠ ಅರಸರೂ ಈ ಗಣದಲ್ಲಿ ಸೇರಿದ್ದಾರೆ. ಅವರೆಲ್ಲರೂ ಅಲ್ಲಾಹನ ಇಂಗಿತಕ್ಕನುಸಾರ ರಾಜ್ಯಭಾರ ನಡೆಸಿ ಪ್ರಜೆಗಳ ಕಲ್ಯಾಣಕ್ಕಾಗಿ ಕೆಲಸ ಮಾಡಿದವರು. ಇದು ಅವರಿಗೆ ಮಾತ್ರ ಸಿಕ್ಕಿರುವ ಪುರಸ್ಕಾರವಲ್ಲ. ಯಾರೆಲ್ಲ ಅವರಂತೆ ವಿಶ್ವಾಸವಿರಿಸಿ ಸತ್ಕರ್ಮ ಮಾಡುತ್ತಾರೋ ಅವರೆಲ್ಲರೊಂದಿಗೆ ಅಲ್ಲಾಹನ ಈ ವಾಗ್ದಾನವಿದೆ.

"ನಿಮ್ಮ ಪೈಕಿ ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗಿದವರೊಡನೆ, ಅಲ್ಲಾಹನು ಅವರಿಗಿಂತ ಮುಂಚಿನವರನ್ನು ಭೂಮಿಯಲ್ಲಿ ಪ್ರತಿನಿಧಿಗಳಾಗಿ ಮಾಡಿದಂತೆಯೇ ಅವರನ್ನು ಮಾಡುವ ನೆಂದು ವಾಗ್ದಾನ ಮಾಡಿರುವನು. ತಾನು ಅವರಿಗಾಗಿ ಮೆಚ್ಚಿರುವ ಅವರ ಧರ್ಮವನ್ನು ಸುಭದ್ರ ಬುನಾದಿಗಳಲ್ಲಿ ಸ್ಥಾಪಿಸುವನು ಮತ್ತು ಅವರ (ಪ್ರಚಲಿತ) ಭಯಾವಸ್ಥೆಯನ್ನು ಶಾಂತಿಯಾಗಿ ಮಾರ್ಪಡಿಸಿ ಬಿಡುವನು." (24:55)